# ವೈಶಾಖ ಶುಕ್ಲ ಪೂರ್ಣಿಮಾ

ಜಿ. ಪಿ. ರಾಜರತ್ನಂ



ಶಾಕ್ಯಸಾಹಿತ್ಯ ಮಂಟಪ
ಮಲ್ಲೇಶ್ವರ, ಬೆಂಗಳೂರು
೧೯೪೦

# ವೈಶಾಖ ಶುಕ್ಲ ಪೂರ್ಣಿಮೆ

ಅಥವಾ

## ಬುದ್ಧನಿಗೆ ಕನ್ನಡದ ಕಾಣಿಕೆ

ಸಂಪಾದಕ :

ಜಿ. ಪಿ. ರಾಜರತ್ನಂ



ಶಾಕ್ಯಸಾಹಿತ್ಯ ಮಂಟಪ

ಮಲ್ಲೇಶ್ವರ, :: :: ಬೆಂಗಳೂರು.

೧೯೪೦

ಪುಟಗಳು XVI+೭೯
**ಬೆಲೆ: ಹತ್ತಾಣೆ**

---

## ಶಾಕ್ಯ ಸಾಹಿತ್ಯ ಮಂಟಪ'ದ

## ಬೌದ್ಧ ಗ್ರಂಥಗಳು

ಬುದ್ಧವಚನ ಪರಿಚಯ
ಮಿಲಿಂದ ಪ್ರಶ್ನೆ
ಮೂರು ಪಾಲಿ ಸೂತ್ರಗಳು
ಪಾಲಿ ಪಜ್ಜ ಪುಷ್ಪಂಜಲಿ
ಬುದ್ಧನ ಕತೆಗಳು (ಸಚಿತ್ರ)
ದಾನವೀರ ವಿಶ್ವಂತರ
ಸುಗತ ಸಂದೇಶ

## ಜೈನ ಗ್ರಂಥಗಳು

ಮಹಾವೀರನ ಮಾತುಕತೆ
ಶ್ರೀ ಗೋಮಟೇಶ್ವರ
ಭಗವಾನ್ ಮಹಾವೀರ



ಬಿ. ಬಿ. ಡಿ. ಪವರ್ ಪ್ರೆಸ್, ಅರಳೇಪೇಟೆ, ಬೆಂಗಳೂರು ಸಿಟಿ.

# ಬಿನ್ನಹ

ಭಗವಂತನಾದ ಬುದ್ಧನ ವಿಷಯವಾಗಿ ಕನ್ನಡದಲ್ಲಿ ಬರೆದು ಜನರ ಮೇಲೆ ಸತ್ಪರಿಣಾಮ ಉಂಟುಮಾಡಿದವರಲ್ಲಿ ಆದ್ಯರು, ಕೈಲಾಸವಾಸಿ ಬಿದರೆ ಅಶ್ವತ್ಥನಾರಾಯಣ ಶಾಸ್ತ್ರಿಗಳು ಇವರು ತಮ್ಮ ಮೊದಲ ಪುಸ್ತಕವಾದ "ಬೌದ್ಧಾವತಾರ"ದ "ಪ್ರಾರ್ಥನೆ"ಯಲ್ಲಿ

"ವಾಚಕ ಮಹಾಶಯರೇ! ಪ್ರಕೃತದಲ್ಲಿ ನಮ್ಮ ಮಾತೃಭಾಷೆಗಳೆಲ್ಲಾ ಹೀನಸ್ಥಿತಿಗೆ ಬಂದು ಎಲ್ಲಿ ನೋಡಿದಾಗ್ಯೂ ಹೂಣ ಭಾಷೆಯೇ ಪ್ರಚಾರಕ್ಕೆ ಬಂದಿರುವುದಲ್ಲದೆ ನಮ್ಮ ಮಾತೃಭಾಷೆಯಾದ ಕನ್ನಡಕ್ಕೆ ಲೇಶವೂ ಪ್ರೋತ್ಸಾಹವಿಲ್ಲದಿರುವುದರಿಂದ ಈ ಪುಸ್ತಕವನ್ನು ವಿಸ್ತರಿಸಿ ಬರೆಯಲು ಭೀತಿಯುಂಟಾಗಿ, ಬುದ್ಧದೇವರ ಜೀವಮಾನಚರಿತ್ರೆ ಮತ್ತು ಈತನು ಪ್ರಪಂಚಕ್ಕೆ ಬೋಧೆ ಮಾಡಿದ ತತ್ವೋಕ್ತಿಗಳನ್ನು ಮಾತ್ರ ಬರೆದಿರುವೆನು"

ಎಂದು ಹೇಳಿಕೊಂಡು, "ವೇದಾಂತವಾಕ್ಯ ಮತ್ತು ಬುದ್ಧೋಕ್ತಿಗಳ ಐಕಕಂಠ್ಯ" ವನ್ನು ಸೂಚಿಸಿ ೬೨ ಪುಟಗಳ ಪುಟ್ಟ ಪುಸ್ತಕವನ್ನು ೨೦-೧೨-೧೯೦೭ ರಲ್ಲಿ ಪ್ರಕಟಿಸಿದರು. ಇದಾದ ಆರು ತಿಂಗಳನಂತರ ೨೫-೭-೧೯೦೮ ರಲ್ಲಿ, ಅವರ ಚಿರಪ್ರಸಿದ್ಧವಾದ "ಧರ್ಮಪದವೆಂಬ ಬುದ್ಧ ಗೀತೆಯು" ಪ್ರಕಟವಾಯಿತು. ಅದರ 'ಉಪೋದ್ಘಾತ'ದಲ್ಲಿ ಗ್ರಂಥಕರ್ತರು

"ಈ ಗ್ರಂಥದ ಮೂಲವು ಪಾಲಿಭಾಷೆಯಿಂದ ಇಂಗ್ಲೀಷು ಭಾಷೆಗೆ ಒಬ್ಬಿಬ್ಬರಿಂದ ಮಾತ್ರ ತರ್ಜುಮೆ ಮಾಡಲ್ಪಟ್ಟಿದೆಯೇ ಹೊರ್ತು, ಈ ಗ್ರಂಥದ ಬೋಧಕನ ಜನ್ಮಭೂಮಿಯಾದ ಈ ನಮ್ಮ ಭರತಖಂಡದಲ್ಲಿ, ನೂರಾರು ಭಾಷೆಗಳು ಪ್ರಚುರವಲ್ಲಿದ್ದಾಗ್ಯೂ, ಯಾವ ಭಾಷೆಗೆ ಆಗಲಿ ತರ್ಜುಮೆ ಮಾಡಲ್ಪಡದೆ ಇರುವ ಕುಂದನ್ನು ನಿವಾರಣೆ ಮಾಡುವ ಉದ್ದಿಶ್ಯ, ಈ ನಮ್ಮ ದರ್ಣಭಾಷೆಗೆ (ಕನ್ನಡ ಭಾಷೆಗೆ) ತರ್ಜುಮೆ ಮಾಡಲು ನಾನು ಪ್ರಯತ್ನಪಟ್ಟಿರುವುದು . . . ಭರತಖಂಡದಲ್ಲಿ ಈ ಗ್ರಂಥದ ವಿಷಯವಾಗಿ ಬರೆಯಲು ನನ್ನ ಅಲ್ಪ ಪ್ರಯತ್ನವೇ ಪ್ರಥಮವಾದುದಾಗಿರುವುದು"

ಎಂದು ಹೇಳಿಕೊಂಡಿದ್ದಾರೆ. ಇದು ವಾಸ್ತವವಾದರೆ ನಮಗೆ ನಿಜವಾಗಿ ಅಭಿಮಾನದ ಸಂಗತಿಯೆ.

ಈ ಪುಸ್ತಕದಲ್ಲಿ ಗ್ರಂಥಕರ್ತರು, ತಮ್ಮ "ಬೌದ್ಧಾವತಾರ"ದಲ್ಲಿ ಮಾಡಿದುದಕ್ಕಿಂತ ಹೆಚ್ಚಾಗಿ ಧರ್ಮಪದಗಳಿಗೆ ಸಮಂಜಸವಾದ ವೇದಾಂತವಾಕ್ಯಗಳನ್ನು ಹೆಜ್ಜೆ ಹೆಜ್ಜೆಗೂ ಕೊಡುತ್ತ ಹೋಗಿದ್ದಾರೆ. ಇದನ್ನು ಕುರಿತು ದಿವಂಗತ (ರಾವ್‌ಬಹದ್ದೂರ್) ಎಂ. ಶಾಮರಾಯರು ತಮ್ಮ 'ಸೂಚನೆ' ಯಲ್ಲಿ

'This is, I believe, to be the first attempt of its kind that has been made in India during two thousand years past'

ಎಂದು ಹೇಳಿರುವುದು ಅವಾಸ್ತವವೆನಿಸುವುದಿಲ್ಲ.

ಇದೇ ಗ್ರಂಥಕರ್ತರು ಮುಂದೆ 'ವ್ಯಾಘ್ರೀಜಾತಕ' ಮತ್ತು 'ಧರ್ಮಸಾಮ್ರಾಜ್ಯ' ಎಂಬ ಬೌದ್ಧವಿಷಯಕವಾದ ಗ್ರಂಥಗಳನ್ನು ಬರೆದು ಅಸ್ತಂಗತರಾದರು. ಮೊದಲೆ ಹೇಳಿದಂತೆ, ನಮಗೆ ತಿಳಿದಿರುವ ಮಟ್ಟಿಗೆ, ಬುದ್ಧನ ವಿಷಯವಾಗಿ ಕನ್ನಡದಲ್ಲಿ ಬರೆದು ಜನರ ಮೇಲೆ ಸತ್ಪರಿಣಾಮ ಉಂಟುಮಾಡಿದವರಲ್ಲಿ ಆದ್ಯರು, ಕೈಲಾಸವಾಸಿ ಬಿದರೆ ಅಶ್ವತ್ಥನಾರಾಯಣ ಶಾಸ್ತ್ರಿಗಳು.

ಎಂದರೆ, ಕನ್ನಡದಲ್ಲಿ ಬೌದ್ಧ ವಿಷಯಗಳನ್ನು ಬರೆಯುವುದಕ್ಕೆ ಅವರೇ ಮೊದಲು, ಎಂದಲ್ಲ. ಅವರ 'ಧರ್ಮಪದ' ಕ್ಕೆ ಮುನ್ನುಡಿ ಬರೆದ ದಿವಂಗತ (ರಾವ್‌ಬಹದ್ದೂರ್) ಎಂ. ಶಾಮರಾಯರು

"About twenty years ago I contributed a series of papers on the life and teachings of Buddha to a Kanarese Journal called Hitabodhini which was in existence then . . ."

ಎಂದು ಬರೆದಿದ್ದಾರೆ. ಎಂದರೆ ೧೮೮೮ ಕ್ಕೆ ಮುಂಚೆಯೇ ಕನ್ನಡಿಗರು ಕನ್ನಡಕ್ಕೆ ಬುದ್ಧನನ್ನು ಕರೆತಂದಿದ್ದರು. ಇದರಂತೆಯೇ, ಕನ್ನಡಿಗರು ಉದಾಸೀನರಾಗಿ ಉಳಿಸಿಕೊಳ್ಳದೆ ಸಾಯಗೊಟ್ಟ ಇನ್ನು ಯಾವ ಯಾವ ಪತ್ರಿಕೆಯಲ್ಲಿ ಯಾರು ಯಾರು ಕೆಲಸ ಮಾಡಿದ್ದರೋ, ಬಲ್ಲವರಾರು?

ಇರಲಿ. ಕನ್ನಡ ಬೌದ್ಧಸಾಹಿತ್ಯಕರ್ತರಲ್ಲಿ ದಿವಂಗತ ಬಿದರೆ ಯವರ ಹೆಸರೂ ಅವರ ಕೃತಿಗಳಲ್ಲಿ ಧರ್ಮಪದದ ಹೆಸರೂ ಪ್ರಸಿದ್ಧ

ವಾದಂತೆ ಬೇರೆ ಯಾರದೂ ಯಾವುದೂ ತಿಳಿದುಬಂದಿಲ್ಲವೆಂಬುದು ನಿಜ. ಎಂದರೆ, ಪಾಲಿಯಿಂದ ಕನ್ನಡಕ್ಕೆ ಬಂದ ಮೊದಲ ಗ್ರಂಥ 'ಧರ್ಮಪದ'– ಬಿದರೆಯವರದು. ಇದರ ಬಳಿಕ ಬಂದ ಭಾಷಾಂತರಗಳೆಂದರೆ ೧೯೧೦–೧೧ ರಲ್ಲಿ ಶ್ರೀ|| ಗೋವಿಂದ ಪೈಗಳು ಭಾಷಾಂತರ ಮಾಡಿ 'ಸ್ವದೇಶಾಭಿ ಮಾನಿ' ಯಲ್ಲಿ ಪ್ರಕಟವಾದ 'ಸಿಗಾಲಸುತ್ತ'; ಮತ್ತು ಅವರೇ ಭಾಷಾಂತರ ಮಾಡಿ ಮ್ಯಾಕ್ಮಿಲನ್ ಕಂಪೆನಿಯ ಕನ್ನಡ ಏಳನೆಯ (?) ರೀಡರಿನಲ್ಲಿ ಈಗ ೧೨–೧೩ ವರ್ಷಗಳ ಕೆಳಗೆ ಪ್ರಕಟವಾದ 'ಧರ್ಮ ಪದ' ದ ಭಾಗಗಳು. ಬಳಿಕ ಬಂದುದು: ೧೯೩೪ ರಲ್ಲಿ 'ಸುಬೋಧ' ದಲ್ಲಿ ಪ್ರಕಟವಾದ 'ಧರ್ಮಪದ', ರಾಜರತ್ನರದು; ೩೪-೩೫ ರಲ್ಲಿ 'ಪ್ರಬುದ್ಧ ಕರ್ಣಾಟಕ' ದಲ್ಲಿ ಪ್ರಕಟವಾದ 'ಸುತ್ತನಿಪಾತದ ಎರಡು ಸೂತ್ರ', 'ಶ್ರಾಮಣ್ಯಫಲಸೂತ್ರ', 'ಅಂಬಷ್ಟಸೂತ್ರ', 'ಸೋಣ ದಂಡಸೂತ್ರ' ಮತ್ತು 'ಕೂಟದಂತಸೂತ್ರ', 'ದೇಶೀಯವಿದ್ಯಾ ಶಾಲಾ ಪತ್ರಿಕೆ' ಯಲ್ಲಿ ಬಂದ 'ವೃಷಲಸೂತ್ರ'–ಅವರದೇ. ಇದಾದ ಮೇಲೆ 'ಅಧ್ಯಾತ್ಮಪ್ರಕಾಶ' ಪತ್ರಿಕೆಯ ಸಂಪಾದಕರಾದ ಶ್ರೀ|| ವೈ. ಸುಬ್ಬರಾಯರು ೧೯೩೫ ರಲ್ಲಿ ಪ್ರಕಟಿಸಿದ 'ಧರ್ಮಪದ'. ಅನಂತರ– 'ಶಾಕ್ಯಸಾಹಿತ್ಯಮಂಟಪ' ವು ೧೯೩೭ ರಿಂದ ಈಚೆಗೆ ಪ್ರಸಿದ್ಧಿಸಿರುವ 'ಬುದ್ಧವಚನ ಪರಿಚಯ', 'ಮಿಲಿಂದಪ್ರಶ್ನೆ', 'ಪಾಲಿ ಪಜ್ಜ ಪುಷ್ಪಂ ಜಲಿ', 'ಬುದ್ಧನ ಕತೆಗಳು' ಎಂಬುದರಿಂದ ಇದುವರೆಗಿನ ಪಾಲೀ ಕನ್ನಡ ಭಾಷಾಂತರ ಕಾರ್ಯವನ್ನು ತಿಳಿಸಿದಂತಾಯಿತು.

ಈ ಭಾಷಾಂತರಗಳಲ್ಲದೆ ಬೌದ್ಧಸಾಹಿತ್ಯದ ಅನುವಾದಗಳೂ ಅಲ್ಲಲ್ಲಿ ಬಂದಿವೆ. ದಿವಂಗತ ಬಾಪೂ ಸುಬ್ಬರಾಯರ ಕಾಲದ 'ವಿದ್ಯಾ ದಾಯಿನಿ'ಯಲ್ಲೂ ಹಳೆಯ 'ಸ್ವಧರ್ಮ'ದ ಸಂಚಿಕೆಗಳಲ್ಲೂ ಕೆಲವು ಜಾತಕಕತೆಗಳ ಅನುವಾದವನ್ನು ಓದಿದ ನೆನಪಿದೆ. ಶ್ರೀ ಎಂ. ಆರ್. ಶ್ರೀನಿವಾಸಮೂರ್ತಿಗಳು ಕೆಲವು ಜಾತಕಗಳನ್ನು ಮ್ಯಾಕ್ಮಿಲನ್ ರೀಡರು ಗಳಿಗಾಗಿ ಕೆಲವು ವರುಷಗಳ ಹಿಂದೆ ಅನುವಾದ ಮಾಡಿದ್ದರು. ಇದ ರಂತೆಯೇ ಶ್ರೀ ಸಾಲಿ ರಾಮಚಂದ್ರರಾಯರು ಮಾಡಿದ ಒಂದೆರಡು ಜಾತಕಗಳನ್ನು 'ದೇಶೀಯ ವಿದ್ಯಾಶಾಲಾ ಪತ್ರಿಕೆ'ಯಲ್ಲಿ ಓದಿದ ನೆನಪು.

ಶ್ರೀಯುತ ಬೆನಗಲ್ ರಾಮರಾಯರು ‘ಕತೆಗಾರ’, ‘ಸರಸ್ವತಿ’ಗಳಲ್ಲಿ ಕೆಲವು ಕತೆಗಳನ್ನು ಬರೆದಿದ್ದಾರೆ. ಈಗ ಶ್ರೀ ಸಿ. ಕೆ. ವೆಂಕಟರಾಮಯ್ಯ ನವರೂ ಶ್ರೀ ದೇವುಡು ಅವರೂ ಜಾತಕ ಕತೆಗಳನ್ನು “ನಮ್ಮ ಪುಸ್ತಕ” ದಲ್ಲಿ ಅನುವಾದ ಮಾಡುತ್ತಿದ್ದಾರೆ.

ಈ ಭಾಷಾಂತರ ಅನುವಾದ ಇವುಗಳ ಜೊತೆಗೆ ಬುದ್ಧ ಮತ್ತು ಬೌದ್ಧಸಂಬಂಧಿಯಾದ ಅನೇಕ ಲೇಖನಗಳು ಅನೇಕರಿಂದ ‘ಸ್ವಧರ್ಮ’, ‘ಜಯಕರ್ನಾಟಕ’, ‘ಸುಬೋಧ’, ‘ಪ್ರಬುದ್ಧಕರ್ಣಾಟಕ’, ‘ಶರಣ ಸಾಹಿತ್ಯ’ ಮುಂತಾದ ಹಿಂದಿನ ಹಾಗೂ ಇಂದಿನ ಅನೇಕ ಪತ್ರಿಕೆಗಳಲ್ಲಿ ಪ್ರಕಟವಾಗಿವೆ, ಆಗುತ್ತಲೂ ಇವೆ. ಆದರೆ ಇವೆಲ್ಲವೂ ಸುಲಭವಾಗಿ, ಬೇಕೆಂದಾಗ ಒಂದು ಕಡೆ ಸಿಕ್ಕುವಂತಿಲ್ಲ.

ಬುದ್ಧ ಮತ್ತು ಬೌದ್ಧಸಂಬಂಧಿಯಾದ ವಿಷಯಗಳು ಪುಸ್ತಕ ರೂಪದಲ್ಲಿ ಬಂದಿರುವುದು ತೀರ ಕಡಿಮೆ. ಶ್ರೀ ಬಿ. ನಾರಾಯಣಸ್ವಾಮಿ ರಾಯರ ‘ಬೌದ್ಧದೇಶೀಯರ ನಡೆನುಡಿಗಳು’, ಶ್ರೀ ರಾಜರತ್ನರ ‘ಚೀನಾ ದೇಶದ ಬೌದ್ಧಯಾತ್ರಿಕರು’, ಶ್ರೀ ಎಂ. ರಾಮರಾಯರ ‘ಬುದ್ಧದೇವ’, ಶ್ರೀ ರಾಜರತ್ನರ ‘ಧರ್ಮದಾನಿ ಬುದ್ಧ’, ‘ಗೌತಮ ಬುದ್ಧ’, ಶ್ರೀ ಹರ್ಡೇ ಕರ್ ಮಂಜಪ್ಪನವರ ‘ಬುದ್ಧಚರಿತ್ರೆ’, ಶ್ರೀ ಸಿ. ಕೆ. ವೆಂಕಟರಾಮಯ್ಯ ನವರ ‘ಬುದ್ಧ’, ಶ್ರೀ ಸರೋವರ ಶ್ರೀನಿವಾಸಾಚಾರ್ಯರ ‘ಬುದ್ಧದೇವ’, ಶ್ರೀ ಮಹದೇವ ಪ್ರಭಾಕರ ಪೂಜಾರರ ‘ಅಶೋಕ ಚಕ್ರವರ್ತಿ’, ರಾಜ ರತ್ನರ ‘ಅಶೋಕ ಮೌರ್ಯ’ ಮತ್ತು ‘ಶ್ರೀ ಹರ್ಷ’, ಶ್ರೀ ಸಿ. ಕೆ. ವೆಂಕಟ ರಾಮಯ್ಯನವರ ‘ಹರ್ಷವರ್ಧನ’, ಶ್ರೀ ಡಿ. ಆರ್. ಚನ್ನೇಗೌಡರ ‘ಅಶೋಕ ಚಕ್ರವರ್ತಿ’; ಇವುಗಳ ಜೊತೆಗೆ ಶ್ರೀ ಹೊಸಕೆರೆ ಚಿದಂಬರಯ್ಯ ನವರು ‘ಭರತಖಂಡದ ಜೀವಜ್ಯೋತಿಗಳು’ ಪುಸ್ತಕದಲ್ಲೂ, ಡಾ. ಎಂ. ಎಚ್. ಕೃಷ್ಣ ಅವರು ‘ಚರಿತ್ರೆಯ ಮಹಾಪುರುಷರು’ ಪುಸ್ತಕದಲ್ಲೂ, ಶ್ರೀ ಎಂ. ಆರ್. ಶ್ರೀನಿವಾಸಮೂರ್ತಿಗಳು ಮೈಸೂರು ವಿದ್ಯಾಭ್ಯಾಸದ ಇಲಾಖೆಯ ಏಳನೆಯ ರೀಡರಿನಲ್ಲೂ ಬರೆದಿರುವ “ಗೌತಮ ಬುದ್ಧ” ಪರವಾದುವನ್ನೂ ಸೇರಿಸಿದರೆ—ಪುಸ್ತಕರೂಪದಲ್ಲಿ ಬಂದವುಗಳ ಪಟ್ಟಿ ತೀರಿತು.

ಇನ್ನು ಉಳಿದುವು ಸ್ವತಂತ್ರ ಕೃತಿಗಳು-ಬುದ್ಧ ಬೌದ್ಧಗಳನ್ನು ಆಶ್ರಯಿಸಿ ಕನ್ನಡ ಕವಿಗಳು ರಚಿಸಿರುವ ನಾಟಕಗಳು, ಕತೆಗಳು, ಕವನಗಳು.

ನಾಟಕಗಳಲ್ಲಿ ಶ್ರೀ ಪುಟ್ಟಪ್ಪನವರ 'ಮಹಾರಾತ್ರಿ', ಶ್ರೀ ಕಾರಂತರ 'ಬೌದ್ಧಯಾತ್ರಾ', 'ಶ್ರೀನಿವಾಸ'ರ 'ಯಶೋಧರಾ' ಮತ್ತು ಶ್ರೀ ಬಿ. ಪುಟ್ಟಸ್ವಾಮಯ್ಯನವರ 'ಗೌತಮ ಬುದ್ಧ' ಇವು ಹೆಸರಾದವು, ರಂಗಸ್ಥಳದ ಮೇಲೆ ಬಂದು ಬದುಕಿದವು. 'ಮಹಾರಾತ್ರಿ'ಯನ್ನು ಅನೇಕ ಶಾಲಾಸಂಘಗಳು ಆಡಿರುತ್ತವೆ. 'ಯಶೋಧರಾ'ವನ್ನು ಬೆಂಗಳೂರಿನ ಎ. ಡಿ. ಎ. ಅವರು ಹಲವುಬಾರಿ ಆಡಿದ್ದಾರೆ; ಈ ದಿನ ರಾತ್ರಿ ಟ್ರಿಚಿ ತಾಣದಿಂದ ಅದು ಬಾನುಲಿಯಲ್ಲಿ ಹರಡಿ ಬರುತ್ತದೆ. ಶ್ರೀ ಬಿ. ಪುಟ್ಟಸ್ವಾಮಯ್ಯನವರೇ 'ಗೌತಮಬುದ್ಧ' ನಾಟಕವನ್ನು ಬರೆದವರೆಂದು ಅನೇಕರಿಗೆ ತಿಳಿಯದಿದ್ದರೂ 'ಚಂದ್ರಕಲಾ ಕರ್ನಾಟಕ ನಾಟಕ ಕಂಪೆನಿ'ಯು ಆ ನಾಟಕವನ್ನು ಆಡುತ್ತಿದ್ದುದೂ, ಅದರಲ್ಲಿ ಕೀರ್ತಿಶೇಷರಾದ ಮಹಮದ್ ಪೀರ್ ಅವರು ಗೌತಮಬುದ್ಧನ ಪಾತ್ರವನ್ನು ವಹಿಸುತ್ತಿದ್ದುದೂ, ಜನರು ಇನ್ನೂ ಉತ್ಸಾಹದಿಂದ ನೆನೆಸಿಕೊಳ್ಳುವ ಮಾತಾಗಿದೆ.

ಕಾರಂತರ 'ಬೌದ್ಧಯಾತ್ರಾ' ವಾದರೋ—ಅವರ ಒಂದೊಂದೂ ಕೆಲಸದಂತೆ—ಒಂದು ಪ್ರಯೋಗ. ಅದರ ಮುನ್ನುಡಿಯನ್ನೇ ಇಲ್ಲಿ ಎತ್ತಿ ಕೊಡುವುದು ವಾಸಿ :

"ಇಷ್ಟರ ತನಕ ಗದ್ಯರಾಜ್ಯದಲ್ಲಿಯೇ ನನ್ನ ಹುಚ್ಚಾಟವಿತ್ತು. ಈಗ ಪದ್ಯಕ್ಕೂ ಬಂದಿದೆ ಎಂದು ಹಲವರಿಗೆ ಆಶ್ಚರ್ಯವಾಗಬಹುದು. ಅಂಥವರಲ್ಲಿ ನಾನು ಕ್ಷಮೆ ಕೇಳದಿರಲಾರೆ. ನಾನು ಗದ್ಯಸಾಹಿತಿಯೂ ಅಲ್ಲ, ಪದ್ಯಸಾಹಿತಿಯೂ ಅಲ್ಲ. ನನ್ನ ಕಲ್ಪನೆಗಳಿಗೆ ಅನುಕೂಲ ಕಂಡ ವಾಹಕಗಳಲ್ಲಿ ರೂಪುಗೊಡುವ ದುಡುಕಿ . . . ಈ ಹಾಡನ್ನು 'ನಾಟ್ಯರೂಪಚಿತ್ರ' ವೆಂಬ ಹೊಸ ಹೆಸರಿನಿಂದ ಕರೆಯುತ್ತಿದ್ದೇನೆ. ಕಥಾಭಾಗವು, ನಾಟಕದಂತೆ, ಯುಕ್ತ ನಟರಿಂದಲೂ ದೃಶ್ಯಾವಳಿಯಿಂದಲೂ ಕೂಡಿದ್ದು ಪ್ರದರ್ಶನವಾಗತಕ್ಕುದು. ಅವರ ಮೌನ ನಟನೆಯನ್ನು ಮೇಳೈಸಿ ಹೋಗುವಂತೆ, ಹಾಡುಗಾರನೊಬ್ಬನು ಅದನ್ನು ಹಾಡಿ ತೋರಿಸುವುದು. ಈ ರೀತಿ ಹಾಡುಗಾರನೂ ನಟರೂ ಕೂಡಿ ಒಂದಾಗಿ ಸಾಗಿದರೆ, ಈ ಚಿತ್ರವು ತೀರ ಬಲವಂತವಾದ ಪರಿಣಾಮವನ್ನು

ಉಂಟುಮಾಡುವುದೆಂದು ನನ್ನ ವಿಶ್ವಾಸವು. ಇಂಥ ಪ್ರಯೋಗಗಳ ಆಕರ್ಷಣ ಶಕ್ತಿಯು ಹೆಚ್ಚಿನದೆಂಬುದರಿಂದ ಈ ಸಾಹಸವನ್ನು ಪರೀಕ್ಷಾರ್ಥವಾಗಿ ಮಾಡಿ ರುವೆನಲ್ಲದೆ ನಾನೊಬ್ಬ ಕವಿಯೆಂಬ ತಿಳುವಳಿಕೆಯಿಂದಲ್ಲ. ಇದು ಕಲಾಪ್ರೇಮಿ ಗಳ ಆದರವನ್ನು ಪಡೆದರೂ ಸರಿಯೆ, ವಿಮರ್ಶೆಗೆ ಗುರಿಯಾದರೂ ಸರಿಯೆ— ನಾನು ತೃಪ್ತನು."

ಈ ಪ್ರಯೋಗವನ್ನು ಮೊದಲ ಬಾರಿ ನೋಡುವ ಭಾಗ್ಯ ನನ ಗಿತ್ತು. ಈಚೆಗೆ, ಕೃಶಾಗೌತಮಿಯು ಬುದ್ಧನ ಮಾತಿನಂತೆ ಸತ್ತ ಮಗುವನ್ನು ಬದುಕಿಸಲು ಸಾವಿಲ್ಲದವರ ಮನೆಯ ಸಾಸಿವೆಯನ್ನು ಹುಡುಕಿಕೊಂಡು ಹೊರಟ ಕತೆಯನ್ನೂ ಹೀಗೆಯೇ ಮಾಡಿ ಆಡಿಸಿದ ರೆಂದು ಕೇಳಿದ್ದೇನೆ. ಇರಲಿ.

ಕತೆಗಳಿಗೆ ಬಂದರೆ ಶ್ರೀ ತಿರುಮಲೆ ತಾತಾಚಾರ್ಯ ಶರ್ಮರು 'ದೇಶೀಯ ವಿದ್ಯಾಶಾಲಾ ಪತ್ರಿಕೆ'ಯಲ್ಲಿ ಬರೆದ 'ಮಿಂಚಿನ ಬಳ್ಳಿಗಳು' ಮಾಲೆಯ ಚಿತ್ರಗಳೂ 'ಶ್ರೀನಿವಾಸ' ರು 'ಜಯಕರ್ನಾಟಕ'ದಲ್ಲಿ ಮೊದಲು ಬರೆದು ಈಚೆಗೆ ಪುಸ್ತಕದಲ್ಲಿ ತಂದ 'ಸಾರಿಪುತ್ರನ ಕಡೆಯ ದಿನಗಳೂ' ಗಮನವನ್ನು ಸೆಳೆದಂತೆ ಬೇರಾವುದೂ ಸೆಳೆದಿಲ್ಲ.

ಇನ್ನು ಉಳಿದುವು ಕವಿತೆಗಳು. ನಮ್ಮ ನಾಡಿನ ಹೆಸರಾದ ಕವಿ ಗಳೆಲ್ಲರೂ ಒಂದಲ್ಲ ಒಂದು ಕಡೆ ಬುದ್ಧನನ್ನು ಸ್ಮರಿಸಿದ್ದಾರೆಂದು ನನ್ನ ನಂಬಿಕೆ. ಅವುಗಳಲ್ಲಿ ಶ್ರೀಯುತರಾದ ಹೊಯಿಸಳ, ವಿ. ಸೀ., ಶ್ರೀನಿ ವಾಸ, ಪುಟ್ಟಪ್ಪ, ನರಸಿಂಹಾಚಾರ್, ಗೋವಿಂದ ಪೈ, ಬೇಂದ್ರೆ ಇವರ ಬುದ್ಧಪರವಾದ ಕೃತಿಗಳು ಪರಿಚಿತವಾದವೇ.

ಮೇಲೆ, ನಾನು ಒಂದು ಪ್ರಯತ್ನ ಮಾಡಿದ್ದೇನೆ: ಹೊಸಗನ್ನಡ ದಲ್ಲಿ ಆಗಿರುವ ಬೌದ್ಧಸಾಹಿತ್ಯ ಕಾರ್ಯವನ್ನು ಪರಿಚಯ ಮಾಡಿ ಕೊಡಲು. ಈ ಪರಿಚಯ ಪೂರ್ಣವಲ್ಲ, ಅಪೂರ್ಣ—ಎಂಬುದು ನನಗೇ ಗೊತ್ತು. ಕನ್ನಡದ ಬಗ್ಗೆ ಏನಾದರೂ ತಿಳಿಯಬೇಕಾದರೆ "ಕನ್ನಡ ಸಾಹಿತ್ಯ ಪರಿಷತ್ತಿ"ನಂತಹ ಸಂಸ್ಥೆಗೆ ಹೋಗುವುದು ಸಹಜ. ಅಲ್ಲಿ ಎಷ್ಟು ಸಾಧನ ಸಾಮಗ್ರಿ ಸಿಕ್ಕುವುದೋ ಅಷ್ಟನ್ನೂ ಬಳಸಿಕೊಂಡು ಈ

ಪರಿಚಯುವನ್ನು ಪಡಿಸಲಾಗಿದೆ. 'ಕನ್ನಡ ಸಾಹಿತ್ಯ ಪರಿಷತ್ತಿ'ನ ಸರಸ್ವತೀ ಭಂಡಾರ ಪೂರ್ಣವಾಗಿದ್ದಿದ್ದರೆ, ಕನ್ನಡಿಗರು ಅದನ್ನು ಪೂರ್ಣಗೊಳಿಸಿದ್ದಿದ್ದರೆ, ಈ ಪರಿಚಯ ಕೂಡ ಪೂರ್ಣವಾಗಬಹುದಾಗಿತ್ತು. ಅದು ಇಲ್ಲದುದರಿಂದ ಇದು ಕೂಡ ಅಪೂರ್ಣವಾಗಿಯೇ ಬರಬೇಕಾಯಿತು. ಕನ್ನಡಿಗರೇ ಕನ್ನಡದ ಮುಖ ತಿವಿದು 'ನಿಮ್ಮಲ್ಲಿ ಏನಿದೆ?' ಎಂದು ಕೇಳುವಾಗ, ಈ ಒಂದು ವಿಶೇಷ ಕ್ಷೇತ್ರದಲ್ಲಿ ಆಗಿರುವ ಕಾರ್ಯದ ಅಪೂರ್ಣ ಪರಿಚಯುವಾದರೂ ಇರುವದು ಲೇಸೆಂದು ನನ್ನ ಭಾವನೆ.

ಇನ್ನು, ಈ ಪುಸ್ತಕವನ್ನು ಕುರಿತು. ಮೇಲೆ ತಿಳಿಸಿದ ಪರಿಚಯವನ್ನು ದೃಢಪಡಿಸುವುದು ಈ ಸಂಕಲನದ ಉದ್ದೇಶ. ಕನ್ನಡಕ್ಕೆ ಬುದ್ಧನ ಬಗ್ಗೆ ಏನು ಭಾವನೆಯೆಂಬುದನ್ನು ಗ್ರಹಿಸಲು ಅಲ್ಲಿ ಆದ ಭಾಷಾಂತರ ಅನುವಾದಗಳಿಗಿಂತ ಸ್ವತಂತ್ರಕೃತಿಗಳೆ ಹೆಚ್ಚು ಸಹಾಯಕಗಳಾದ ಕಾರಣ, ಇಲ್ಲಿ ಹೆಚ್ಚಾಗಿ ಸ್ವತಂತ್ರಕೃತಿಗಳನ್ನೂ ಏಳು ಭಾಷಾಂತರಗಳನ್ನೂ ಕೊಟ್ಟದ್ದೇನೆ. ಬೇರೆ ಬೇರೆ ಕಡೆ ಬಂದಿರುವ, ಬಂದಿದ್ದರೂ ಸುಲಭವಾಗಿ ಸಿಕ್ಕದಿರುವ (ಕೆಲವು), ಈ ಕೃತಿಗಳನ್ನೆಲ್ಲ ಒಟ್ಟುಗೂಡಿಸಿ ಕೊಡಬೇಕೆಂದಿದ್ದ ನನ್ನ ಬಹುದಿನದ ಬಯಕೆ ಇಂದು ಕೈಗೂಡಿದೆ.

ಇಂದು ಮಹಾದಿವನ, ವೈಶಾಖ ಶುಕ್ಲ ಪೂರ್ಣಿಮೆ; ಬುದ್ಧನು ಭೂಮಿಗೆ ಅವತರಿಸಿದ ದಿವಸ, ಬುದ್ಧನು ಬೋಧಿಯುನ್ನು ಸಾಕ್ಷಾತ್ಕರಿಸಿಕೊಂಡ ದಿವಸ, ಬುದ್ಧನು ಪರಿನಿರ್ವಾಣವನ್ನು ನಾಧಿಸಿಕೊಂಡ ದಿವಸ; ಹೀಗೆ ಮುಪ್ಪುರಿಗೊಂಡ ಮಹಾದಿವಸ. ಇಂತಹ "ವೈಶಾಖ ಶುಕ್ಲ ಪೂರ್ಣಿಮಾ" ಪುಣ್ಯದಿವಸದಲ್ಲಿ "ಬುದ್ಧನಿಗೆ ಕನ್ನಡದ ಕಾಣಿಕೆ" ಯನ್ನು, ಈ ಕೃತಿಗಳ ಮಾಲೆಯನ್ನು, ಕಟ್ಟಿ ಸಮರ್ಪಿಸಿದ ಸಯ್ಪು ನನ್ನದು.

ಈ ಸತ್ಸೇವೆ ಸಾಧ್ಯವಾಗುವಂತೆ ಮಾಡಲು ತಮ್ಮ ಕೃತಿಗಳಿಂದ ಬೇಕಾದುದನ್ನು ಆಯ್ದುಕೊಳ್ಳಲು ಅನುಮತಿ ಕೊಟ್ಟ ಶ್ರೀಯುತರುಗಳಾದ 'ಶ್ರೀನಿವಾಸ', 'ವಿ. ಸೀ.', ಸಿ. ಕೆ. ವೆಂಕಟರಾಮಯ್ಯ, ಕೆ. ವಿ. ಪುಟ್ಟಪ್ಪ, ಪು. ತಿ. ನರಸಿಂಹಾಚಾರ್, ರಾಜರತ್ನಂ, ಶಿವರಾಮ ಕಾರಂತ,

ಹೊಯಿಸಳ, ತಿರುಮಲೆ ತಾತಾಚಾರ್ಯ ಶರ್ಮ, ಎಂ. ಆರ್. ಶ್ರೀನಿವಾಸಮೂರ್ತಿ, ಗೋವಿಂದ ಪೈ, ಬಿ. ಪುಟ್ಟಸ್ವಾಮಯ್ಯ, ಬೇಂದ್ರೆ—ಇವರಿಗೂ; ಶ್ರೀ ಹೊಯಿಸಳರ ಕೃತಿಗಳ ಉಪಯೋಗಕ್ಕಾಗಿ ಸತ್ಯಶೋಧನ ಪ್ರಕಟನ ಮಂದಿರದವರಿಗೂ; 'ವ್ಯಾಘ್ರೀಜಾತಕ'ದ ಭಾಷಾಂತರಕ್ಕಾಗಿ ಮಿತ್ರರೊಬ್ಬರಿಗೂ; ಉಳಿದ ಅನುವಾದಗಳಿಗೆ 'ಶಾಕ್ಯಸಾಹಿತ್ಯ ಮಂಟಪ'ಕ್ಕೂ ನನ್ನ ಹೃತ್ಪೂರ್ವಕ ಕೃತಜ್ಞತೆಗಳನ್ನು ನಮಸ್ಕಾರ ಪೂರ್ವಕ ನೀಡುತ್ತೇನೆ. ಪುಸ್ತಕವನ್ನು ಇಷ್ಟು ಅಂದವಾಗಿ ಅತ್ಯಲ್ಪಕಾಲದಲ್ಲಿ ಮುಗಿಸಿಕೊಟ್ಟ ಬಿ. ಬಿ. ಡಿ. ಪವರ್ ಪ್ರೆಸ್ಸಿನವರಿಗೂ ನಾನು ಋಣಿ.

ಇನ್ನು ಉಳಿದುದು ಎರಡು ಮಾತು: 'ಶಾಕ್ಯಸಾಹಿತ್ಯಮಂಟಪ'ದ ಕಾರ್ರ್ಯವನ್ನು ಕುರಿತು. ಕೆಲವು ತಿಂಗಳ ಹಿಂದೆ 'ಬುದ್ಧನ ಕತೆಗಳು' ಪ್ರಕಟವಾದಾಗ, ಪ್ರಕಟಣೆ ಅಲ್ಲಿಗೆ ನಿಂತಿತೆಂದು ಹೇಳಿದ್ದೆ. ಮೊದಲು 'ಬುದ್ಧವಚನ ಪರಿಚಯ' ಪ್ರಕಟವಾದಾಗ ಸುಮಾರು ಮುನ್ನೂರು ಜನ ಪ್ರತಿಗಳನ್ನು 'ಕೊಂಡರು'; ಅವರಲ್ಲಿ ಬೆಲೆ 'ಕೊಟ್ಟವರು' ಸುಮಾರು ಎಂಬತ್ತು ಮಾತ್ರ. 'ಬುದ್ಧನ ಕತೆಗಳು' ಬಂದಾಗ ಸಹಾಯಕರ ಸಂಖ್ಯೆ ಸುಮಾರು ಐವತ್ತಕ್ಕೆ ಇಳಿಯಿತು. ಈಗ ಮೂರನೆಯ ವರ್ಷ ಕೆಲಸಕ್ಕೆ ನಿಂತರೆ—ಸಹಾಯಕರ ಸಂಖ್ಯೆ ಮೂವತ್ತಕ್ಕೆ ಮುಟ್ಟುವುದು ಕಷ್ಟವಾಗಿದೆ. ಕೆಲಸ ಮುಂದೇನು ಹರಿದೀತು? ಆದರೂ ಇಂತಹ ಕೆಲಸ ಆಗಬೇಕೆಂದು ಒಂದು ಹತ್ತಿಪ್ಪತ್ತು ಹಿತವರ ಹಂಬಲ, ಅವರದೇ ಆದಷ್ಟು ಬೆಂಬಲ. ಅಲ್ಲದೆ ಹಬ್ಬದ ದಿನ ಹೇಗಾದರೂ ಹೋಳಿಗೆ ಮಾಡಬೇಕೆಂದು ಹೃದಯದ ಮಿಡಿತ. ನಮಗೆ ಸದ್ಯಕ್ಕೆ ಎರಡು ದೊಡ್ಡ ಹಬ್ಬ. ಮೊದಲನೆಯದು, ಈ ದಿನದ ವೈಶಾಖ ಶುಕ್ಲ ಪೂರ್ಣಿಮೆ, ಬುದ್ಧನ ಹೆಸರಿಗೆ ಹಸುರುದಿನ. ಈ ದಿನದ ವಿಶೇಷ ಈ ಪುಸ್ತಕ. ಆಸೆ ತೀರಿತು. ಎರಡನೆಯ ದೊಡ್ಡ ಹಬ್ಬ, ನಾಳೆ ಜೂನ್ ತಿಂಗಳ ಕಡೆಯಲ್ಲಿ ನೆರವೇರುವ ಕನ್ನಡ ಸಾಹಿತ್ಯ ಪರಿಷತ್ತಿನ ಬೆಳ್ಳಿಯ ಹಬ್ಬ. ಆ ದಿನ ಕನ್ನಡದ ಕಾಲಬಳಿ ಇಡಲು 'ದಾನವೀರ ವಿಶ್ವಂತರ' ಮತ್ತು 'ಸುಗತ ಸಂದೇಶ' ಎಂಬ ಎರಡು ಪುಸ್ತಕ ಸಿದ್ಧವಾಗುತ್ತಿದೆ. ಈ ಕಾರಣಗಳಿಂದ ಮತ್ತೆ ಎತ್ತಿ

ಕೊಂಡ ಪ್ರಕಟಣೆಯು ಈ ಎರಡು ಪುಸ್ತಕ ಬಂದಿತೆಂದರೆ, ಮಂಟಪದ ಪ್ರಕಟಣೆ ಮುಗಿಯುವುದು; ನಾಟಕ ಕಂಪೆನಿಯವರ 'ಕಡೇ ಆಟ' ದಂತಲ್ಲ, 'ಶಾಕ್ಯಸಾಹಿತ್ಯಮಂಟಪ'ದ ಪ್ರಕಟಣೆಯಂತೆ.

ಪ್ರಕಟಣಕಾರ್ಯ, ಅದರಲ್ಲೂ ಕನ್ನಡದಲ್ಲಿ, ಅದರಲ್ಲೂ ಪಠ್ಯ ಪುಸ್ತಕಗಳಾಗಲಾರದವುಗಳ ಪ್ರಕಟಣಕಾರ್ಯ ನಿಜವಾಗಿಯೂ ದೊಡ್ಡ ಉದ್ಧಾರಕಾರ್ಯ: ಬಹುಮಟ್ಟಿಗೆ ಕಾಗದ, ಮಸಿ, ಮೊಳೆ ತಯಾರು ಮಾಡುವವರ; ಇನ್ನುಳಿದ ಮಟ್ಟಿಗೆ ಅಚ್ಚುಕೂಟದವರ. ಇದರಿಂದ ತೀರುವುದು—ಕನ್ನಡದಲ್ಲಿ ನಾಲ್ಕು ಹೊಸ ವಿಷಯ ತಂದೇನೇ ಎಂಬ ಆಸೆ, ತೀರದುದು—ಮುತ್ತಿ ಮೆತ್ತಿಕೊಂಡ ಸಾಲ.

ನಾಲ್ಕು ಜನ ನಿಂತಾಗ, ನಾಲ್ಕು ಬೀದಿ ಸೇರಿದಲ್ಲಿ ಹೇಳುವುದುಂಟು: "ಈ ಕನ್ನಡ ಸಾಹಿತಿಗಳಿಗೆ ಸ್ಥೈರ್ಯ ಸಾಲದು. ಹಿಡಿದ ಕೆಲಸ ಕೊನೆಮುಟ್ಟ ನಡೆಸರು. ಇವರ ಕೆಲಸಗಳಿಗೆಲ್ಲ ಬಾಲಗ್ರಹ ಬೆನ್ನಿಗೆ ಅಂಟಿದ್ದು" ಎಂದು. ನಾನು ನಾಲ್ಕು ವರ್ಷಗಳ ಕಾಲ ಕನ್ನಡಿಗರ ನಡುವೆ ಓಡಾಡಿ, ಕೆಲಸ ಮಾಡಲು ಯತ್ನಿಸಿ, ಕನ್ನಡ ಜನತೆಯ ಸಂಸ್ಕೃತಿಯನ್ನು ಕಂಡಿದ್ದೇನೆ, ಕೇಳಿದ್ದೇನೆ, ಅನುಭವಿಸಿದ್ದೇನೆ; ಈ ಕನ್ನಡ ಸಾಹಿತ್ಯದ ಬೆನ್ನಿಗೆ ಅಂಟಿ ಬಂದ ಬಾಲಗ್ರಹದ ಮೂಲದ ಬಗ್ಗೆ ತಿಳಿವಳಿಕೆ ಪಡೆದಿದ್ದೇನೆ. ಅದನ್ನು ಕುರಿತು ಮಾತನಾಡುವ ಅವಕಾಶ ಇಂದಲ್ಲ.

ಇಂದು ಹಬ್ಬದ ದಿವಸ. ಹರುಷ ಮಾತ್ರ ಮುಂದಿರಲಿ, ಉಳಿದ ಎಲ್ಲ ಹಳಸಿದುದು ಹಿಂದೆ ಮರೆಯಾಗಿರಲಿ. ಇಂದಿನ ಈ ಹೊಸ ವೈಶಾಖ ಶುಕ್ಲ ಪೂರ್ಣಿಮೆಯು ಜಗದ ಹೃತ್ಕುಮುದ ಕೋರಕವನ್ನು ಅರಳಿಸಲಿ, ಜಗತೀವಲಯುದಮಲಸೌಭಾಗ್ಯರತ್ನಾಕರವನ್ನು ಹೆಚ್ಚಿಸಿ ಮೇರೆವರಿಯಿಸಲಿ.

೨೦-೫-೪೦
ವೈಶಾಖ ಶುಕ್ಲ ಪೂರ್ಣಿಮೆ

ಜಿ. ಪಿ. ರಾಜರತ್ನಂ.

# ಮೂರು ಶಾಸನ ಪದ್ಯ

ಪದದೊಳ್ ಕೂರ್ಮಸ್ವರೂಪಂ ನಯನಯುಗಳದೊಳ್ ಮತ್ಸ್ಯರೂಪಂ ಘನಗ್ರೀ
ವದೊಳಾದಿಕ್ರೋಡರೂಪಂ ನಡುವಿನೊಳು ನೃಸಿಂಹತ್ವವಾತ್ಮಪ್ರಭಾವಾ
ಸ್ಪದದೊಳ್ ರಾಮತ್ರಯತ್ವಂ **ಮತಿವಿಕಸನದೊಳ್ ಬುದ್ಧರೂಪಾಗಿ** ಗುಬ್ಬಾಂ
ಗದ ಕಲ್ಕಿತ್ವಕ್ಕೆ ಮೆಯ್ದೋರದ ಹರಿಯೆನಿಸಂ ವಿಷ್ಣುಜಿಷ್ಣುಕ್ಷಿತೀಶಂ

**—ಹಾಸನ. ೫೩. ಕ್ರಿ. ಶ ೧೧೭೦**

ಅನವದ್ಯೇಕ್ಷಣಮತ್ಸ್ಯನಂಘ್ರಿಕಮಠಂ ಗ್ರೀವಾವರಾಹಂ ಸುಮ
ಧ್ಯನೃಸಿಂಹಂ ಕ್ಷಿತಿಮಂಡಲಾಕ್ರಮಣಕೇಳೀವಾಮನಂ ಶತ್ರುಶಾ
ಸನ ರಾಮತ್ರಿತಯಂ **ಸ್ವಯೋಗಬಳಬುದ್ಧಂ** ದುಷ್ಪ್ರಜೋನ್ಮಾತ ಕ
ಲ್ಕಿ ನಿಜಾಧೀಶ ದಶಾವತಾರನೊಗೆದಂ ಬಲ್ಲಾಳ ಭೂಪಾಳಕಂ

**—ಚೆನ್ನಗಿರಿ. ೭೨. ಕ್ರಿ. ಶ. ೧೨೨೦**

ಯಂ ಶೈವಾಸ್ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನೋ
ಬೌದ್ಧಾ ಬುದ್ಧ ಇತಿ ಪ್ರಮಾಣಪಟವಃ ಕರ್ತೇತಿ ನೈಯಾಯಿಕಾಃ
ಅರ್ಹಶ್ಚೇತಿಹ ಜೈನಶಾಸನಮಿತಿ ಕರ್ಮೇತಿ ಮೀಮಾಂಸಕಾಃ
ಸೋಽಯಂ ವೋ ವಿದಧಾತು ವಾಂಛಿತಫಲಂ ಶ್ರೀ ಕೇಶವೇಶಸ್ಸದಾ

**—ಬೇಲೂರು ೨೩. ಕ್ರಿ. ಶ. ೧೩೯೭ (?)**

# ವಿವರ


ಬಿನ್ನಹ .... .... iii

ಮೂರು ಶಾಸನ ಪದ್ಯ .... .... xii

ವೈಶಾಖ ಶುಕ್ಲ ಪೂರ್ಣಿಮೆ .... xv

ಬುದ್ಧ ಮೂರ್ತಿಯ ಅಮೃತಸ್ಮಿತ .... xvi
(ಅಂಬಿಕಾತನಯದತ್ತರ 'ಉಯ್ಯಾಲೆ'ಯಿಂದ)

೧. ಜಯಗೀತೆ .... .... ೧
('ಶ್ರೀನಿವಾಸ'ರ 'ಯಶೋಧರಾ' ನಾಟಕದಿಂದ)

೨. ಮಹಾತ್ಮ .... .... ೨
(ಬಿ. ಸೀ. ಅವರ 'ದೀಪಗಳು' ಕವನಸಂಗ್ರಹದಿಂದ)

೩. ಮಹಾನುಭಾವ ಬುದ್ಧಗುರು .... ೪
(ಸಿ. ಕೆ. ವೆಂಕಟರಾಮಯ್ಯನವರ 'ಬುದ್ಧ' ಗ್ರಂಥದಿಂದ)

೪. ಆ ಗುರುದೇವ .... .... ೫
("ಶ್ರೀನಿವಾಸ"ರ "ಸಾರಿಪುತ್ರನ ಕಡೆಯ ದಿನಗಳು" ಕತೆಯಿಂದ)

೫. ಬುದ್ಧದೇವ .... .... ೬
(ಕೆ. ವಿ. ಪುಟ್ಟಪ್ಪನವರ "ಪಾಂಚಜನ್ಯ" ಕವನಸಂಗ್ರಹದಿಂದ)

೬. ಬುದ್ಧ .... .... ೭
(ಪು. ತಿ. ನರಸಿಂಹಾಚಾರ್ಯರ "ಹಣತೆ" ಕವನಸಂಗ್ರಹದಿಂದ)

೭. ಸುಗತಸಾಂಗತ್ಯ .... .... ೮
(ರಾಜರತ್ನರ "ಧರ್ಮದಾನಿ ಬುದ್ಧ" ಪುಸ್ತಕದಿಂದ)

೮. ಸಿದ್ಧಾರ್ಥ .... .... ೧೦
(ಬಿ. ಸೀ. ಅವರ "ಗೀತೆಗಳು" ಕವನ ಸಂಗ್ರಹದಿಂದ)

೯. ಬೋಧಿವೃಕ್ಷ .... .... ೧೨
(ಶಿವರಾಮ ಕಾರಂತರ "ಬೌದ್ಧಯಾತ್ರಾ" ಕಾವ್ಯದಿಂದ)

೧೦. ಬುದ್ಧನ ಉಪದೇಶ .... .... ೧೫
("ಶ್ರೀನಿವಾಸ"ರ "ಯಶೋಧರಾ" ನಾಟಕದಿಂದ)

೧೧. ಶ್ರೇಷ್ಠ ಭಿಕ್ಷು .... ... ೧೮

೧೨. ಮೂಲ್ಯಪ್ರಾಪ್ತಿ .... .... ೨೦

೧೩. ಅಭಿಸಾರ .... .... ೨೩
(ಮೇಲಿನ ಮೂರೂ 'ಹೊಯಿಸಳ'ರ 'ತಿರುಗ ಮುರುಗ'ದಿಂದ)

೧೪. ಸುನೀತನ ಗೀತ .... .... ೨೬
('ಶ್ರೀನಿವಾಸರ' ಕೃತಿ ; 'ಜೀವನ' ಮಾಸಪತ್ರಿಕೆಯಿಂದ)
೧೫. ಉರಿವ ಮನೆ .... .... ೩೧
೧೬. ಬಾವಿಯ ಬಳಿಯ ಬಾಲೆ .... .... ೩೨
೧೭. ಕುಂದದಾನಂದ ... ... ೩೪
೧೮. ಜಗಜ್ಜ್ಯೋತಿ ... .... ೩೬
(ಮೇಲಿನ ನಾಲ್ಕೂ ತಿರುಮಲೆ ತಾತಾಚಾರ್ಯ ಶರ್ಮರವು,
'ದೇಶೀಯ ವಿದ್ಯಾಶಾಲಾ ಪತ್ರಿಕೆ'ಯಿಂದ)
೧೯. ಸುನೀತ ಗೀತೆ ... ... ೩೭
೨೦. ದನ್ತಿಕಾ ಗೀತೆ .... ... ೪೦
೨೧. ಪಟಾಚಾರಾ ಗೀತೆ .... .... ೪೧
೨೨. ಬುದ್ಧನ ಸೇವೆ .. .... ೪೨
೨೩. ಆರುದಿಕ್ಕಿನ ಆರಾಧನೆ .... .... ೪೪
(ಮೇಲಿನ ಐದೂ 'ಶಾಕ್ಯಸಾಹಿತ್ಯ ಮಂಟಪ' ದ ಅನುವಾದಗಳಿಂದ)
೨೪. ತಥಾಗತ ... .... ೪೯
(ಎಂ. ಆರ್. ಶ್ರೀನಿವಾಸಮೂರ್ತಿಗಳ ಕೃತಿ)
೨೫. ದಾರಿಯ ಬೆಳಕು .... .... ೫೧
೨೬. ಅಶೋಕ .... .... ೫೩
(ಮೇಲಿನ ಎರಡೂ ಶಿವರಾಮ ಕಾರಂತರ'ಬೌದ್ಧಯಾತ್ರಾ' ದಿಂದ)
೨೭. ಅಶೋಕವಾಣಿ .... .... ೫೫
('ಶಾಕ್ಯಸಾಹಿತ್ಯ ಮಂಟಪ'ದ ಅನುವಾದ)
೨೮. ಅ–ಮೃತ .... .... ೬೦
(ಶಿವರಾಮ ಕಾರಂತರ 'ಬೌದ್ಧ ಯಾತ್ರಾ' ದಿಂದ)
೨೯. ಮಹಾತ್ಮರ ಉಪವಾಸ .... .... ೬೪
(ಗೋವಿಂದ ಪೈ ಅವರ 'ಗಿಳಿವಿಂಡು' ಕವನಸಂಗ್ರಹದಿಂದ)
೩೦. ಬುದ್ಧನ ಬಾಲ್ಯ .... .... ೬೫
(ಬಿ. ಪುಟ್ಟಸ್ವಾಮಯ್ಯನವರ 'ಗೌತಮ ಬುದ್ಧ' ನಾಟಕದ
ಹಸ್ತಪ್ರತಿಯಿಂದ)
೩೧. ವ್ಯಾಘ್ರೀ ಜಾತಕ .... .... ೭೨
(ಆರ್ಯಶೂರನ 'ಜಾತಕ ಮಾಲೆ' ಯಿಂದ ಭಾಷಾಂತರ)

# ವೈಶಾಖ ಶುಕ್ಲ ಪೂರ್ಣಿಮೆ

[ಪಾಲೀ ಬೌದ್ಧ ಸಾಹಿತ್ಯಕ್ಕೆ ತವರುಮನೆಯಾದ ಸಿಂಹಳದ ಸಂಪ್ರದಾಯ ರೀತಿಯಾಗಿ ಬುದ್ಧನ ಪರಿನಿರ್ವಾಣಕಾಲ ಕ್ರಿ. ಪೂ. ೫೪೪. ಆದರೆ ಈ ಕಾಲ ನಿರ್ಣಯ ಮಗಧದ ರಾಜರುಗಳ ಕಾಲಕ್ಕೆ ಸರಿಹೊಂದುವುದಿಲ್ಲವಾಗಿ, ಬುದ್ಧನ ಪರಿನಿರ್ವಾಣಕಾಲ ಕ್ರಿ. ಪೂ. ೪೭೭–೪೮೭ಗಳ ನಡುವೆ ಇರಬೇಕೆಂದು ಪಾಶ್ಚಾತ್ಯ ಪೌರ್ವಾತ್ಯ ಪಂಡಿತರು ವಾದಿಸುತ್ತಾರೆ. ಆದರೆ ಇದನ್ನು ಕೂಡ ಬುದ್ಧನ ಸಮಕಾಲೀನನಾದ ಮಹಾವೀರನ ಕಾಲನಿರ್ಣಯಗಳೊಡನೆ ಹೊಂದಿಸಲು ಕಷ್ಟವಾಗುತ್ತದೆ. ಆದರೆ ಈಚೆಗೆ, ಹಿಂದೆ ಬರ್ಮಾ ದೇಶದಲ್ಲಿ ಪ್ರಚಾರದಲ್ಲಿದ್ದ Eetzana ಎಂಬ ಶಕದ ಆಧಾರದಿಂದ, ಶ್ರೀ ಎಂ. ಗೋವಿಂದ ಪೈಗಳು ನಿರ್ಣಯಿಸಿರುವ ಕಾಲ ಸೂಕ್ತವಾಗಿ ಕಾಣುತ್ತದೆ. ಆದನ್ನು ಕೆಳಗೆ ಕೊಟ್ಟಿದೆ.]

**ಬುದ್ಧನ ಜನನ: ವೈಶಾಖ ಶುಕ್ಲ ಪೂರ್ಣಿಮಾ, ಶುಕ್ರವಾರ.**

(Eetzana ವರ್ಷ ೬೮ ; ಕ್ರಿ. ಪೂ. ೫೮೧ ರ ಮಾರ್ಚಿ ೩೦)

ಬುದ್ಧನ ಗೃಹತ್ಯಾಗ : ಆಷಾಢ ಶುಕ್ಲ ಪೂರ್ಣಿಮಾ, ಆದಿತ್ಯವಾರ ರಾತ್ರಿ.

ಬುದ್ಧನ ವನಪ್ರವೇಶ : ಆಷಾಢ ಶುಕ್ಲ ಪೂರ್ಣಿಮಾ, ಸೋಮವಾರ ಬೆಳಿಗ್ಗೆ.

(Eetzana ವರ್ಷ ೯೬ ; ಕ್ರಿ. ಪೂ ೫೫೩ ರ ಜೂನ್ ೧೮.)

**ಬುದ್ಧನ ಬೋಧಿಲಾಭ : ವೈಶಾಖ ಶುಕ್ಲ ಪೂರ್ಣಿಮಾ, ಬುಧವಾರ.**

(Eetzana ವರ್ಷ ೧೦೩ ; ಕ್ರಿ. ಪೂ. ೫೪೬ ರ ಏಪ್ರಿಲ್ ೩.)

**ಬುದ್ಧನ ಪರಿನಿರ್ವಾಣ: ವೈಶಾಖ ಶುಕ್ಲ ಪೂರ್ಣಿಮಾ, ಮಂಗಳವಾರ**

(Eetzana ವರ್ಷ ೧೪೮ ; ಕ್ರಿ. ಪೂ. ೫೦೧ ರ ಏಪ್ರಿಲ್ ೧೫)

# ಬುದ್ಧಮೂರ್ತಿಯ ಅಮೃತಸ್ಮಿತೆ

ಉದಯಾಸ್ತಗಳ ಜನ್ಮ ಮರಣ ಚಕ್ರದ ಬಾಧೆ
ಇದಕಿಲ್ಲ; ಕುಂದ ಮೀರಿದೆ; ಗ್ರಹಣ ಹತ್ತದಿದ-
ಕೆಂದಿಗೂ; ಬೇರೆ ಫಲದಾಸೆಯಿದನೊಣಗಿಸದು;
ಅಜ್ಞಾನ ಮುಗ್ಧ ಮಾಧುರ್ಯ ಮಧುವಲ್ಲ; ಹೊಸ
ಹರೆಯ ಹುಮ್ಮಸದ ಹುಸಿಬಿಸಿಲುಗುದುರೆಯ ಬಾಯ
ಬುರುಗು ಬೆಳಕಲ್ಲ; ಇದು ಹೊಳೆಯ ದಾಟಿದ ಮೇಲೆ
ಹೊರಳಿ ನೋಡದ ಮಿಂಡ ಪುಂಡ ಬಗೆಯಲ್ಲ; ಮರು-
ಳಿರುಳಿನಲಿ ಮಣ್ಣ ಮುದ್ದಿಡಲು ಬಹ ದಿಗ್ಭ್ರಾಂತ
ನಕ್ಷತ್ರಗಳ ಹುಚ್ಚು ಹೊಳಪಲ್ಲ; ಬುದ್ಧಮೂ-
ರ್ತಿಯ ಅಮರಹಾಸ—ಶ್ರೀ ಬುದ್ಧದೇವನ ದುಃಖ
ಹಿಮಗಿರಿಯ ಶಿಖರದಲಿ ತಪವಿದ್ದ ಶಾಂತಿ ತ-
ನ್ನಸವು ಧ್ಯಾನದ ಗವಿಯ ಗಹನದಲಿ ಗುರುತಿಸಿದ
ಚೆನ್ನ ಕನಸಿನ ಬಿಂಬ. ಆನಂದಕಲ್ಪವೃಕ್ಷಕ್ಕೆ ಬಂ-
ದೊಂದೆ ಹೂ. ಮನೆಮನೆಯ ಪ್ರತಿ ಮನುಜ ಮನಮನದೆ
ಪೂಜಿಸುತ್ತಿಹುದಿದರ ಪೂಜ್ಯ ಪಾರ್ಥಿವ ಪ್ರತಿಮೆ—
ಮೇಗಿಲ್ಲದೀ ನಗೆಯ ಬಣ್ಣ ಮೀರಿದೆ ಮಹಿಮೆ.

—**ಅಂಬಿಕಾತನಯದತ್ತ.**

# ಜಯಗೀತೆ

ಜಯ ಬುದ್ಧ ಗುರುದೇವ ಜಯ ಶುದ್ಧ ಚಾರಿತ್ರ
ಜಯ ತ್ರಿಲೋಕಾಚಾರ್ಯ ಜಯ ಜಗನ್ಮಿತ್ರ
ಜಯ ಪತಿತಪಾವನಾ ಜಯ ಹೆ ದೀನಾವನಾ
ಜಯ ದೇಶಿಕೇಂದ್ರ ಜಯ ಉದ್ಧಾರಕರ್ತ
ಜಯ ತ್ರೈಭುವನ ಪೂಜ್ಯ ಜಯ ಧವಳಕೀರ್ತಿ
ಜಯ ಹೆ ಮಮ ಗುರುನಾಥ ಕಾರುಣ್ಯಮೂರ್ತಿ

—'ಶ್ರೀನಿವಾಸ'

# ಮಹಾತ್ಮ

ಎಲ್ಲವನು ಬಲ್ಲವನು ಎಲ್ಲರಿಗು ಒಲಿವವನು
ಎಲ್ಲವನು ಗೆಲುವವನು ನೀನು ಕಾಣಾ,
ಎಲ್ಲ ಸೊಬಗನು ಸವಿದು ಬಲ್ಲವನು ನೀ ಕಣಾ
ಎಲ್ಲರೂ ಸವಿವನಕ ತಣಿಯದವನು

ಎಲ್ಲ ಕಾಲದ ಜನರ ಎಲ್ಲ ದೇಶದ ಜನರ
ಎದೆಗಳಲಿ ಹರಿದಿರುವ ಒಲುಮೆ ಒಂದೆಂದು
ಎಲ್ಲ ಜನಗಳ ಮನದಿ ಮಲೆತಿರುವ ಭಾವಗಳು
ವೇದನೆಯ ರೀತಿಗಳು ಒಂದೆ ಎಂದು

ಯಾರೆಲ್ಲಿ ನೋಯುತಿರೆ ಬೇನೆವಡುವನು ನೀನು
ಯಾರ ಸಂತಸದಲ್ಲು ಹರುಷಗೊಳುವವನು
ಯಾರೆಲ್ಲಿ ಸತ್ಯವನು ನಿಲಿಸುತಿರಲಲ್ಲೆಲ್ಲ
ಸಾರಿ ಸೇವೆಗೆ ಬಾಗಿ ಸೇರುವವನು

ದೀನರನು ಆರ್ತರನು ನಿರ್ಬಲರ ಬಳಗವನು
ಸೋದರ್ಯರೆಂದೆಂದು ಕಾಯುವವನು
ಎದೆಕರಗಿ ಮನಮರುಗಿ ಕರುಣೆಯಲಿ ಕರೆಯುತ್ತೆ
ಅವರೆದೆಯ ಬೇಗೆಗಳನಿಳಿಸುವವನು

ಅಶುಭದೊಡಲಲಿ ಶುಭವ ಹಿಂಡುತ್ತೆ ಹೀರುತ್ತೆ
ಶುಭದ ಸಾರವನೆರೆದು ಬೆಳೆಸುವವನು
ನಾಳೆಗೆಲ್ಲೆಲ್ಲಿಯೂ ಏಳ್ಗೆ ಬರಲೆನ್ನುತ್ತೆ
ಮೇಲ್ಮೆಗಳ ಬಿತ್ತುಗಳ ಬಿತ್ತುವವನು

ಹೊರಗಿರುವ ರೂಪಗಳ ಭೇದಗಳ ಬಸಿರಲ್ಲಿ
ಎಲ್ಲೆಲ್ಲು ಮೊರೆಯುವುದು ಜೀವವೊಂದೆಂದು
ನಾಕಂಡೆ ನಿಮಗದನು ತೋರುವೆನು ಎನ್ನುತ್ತ
ತಿಳಿದ ಸಂತಸದಲ್ಲಿ ಮುದಿಸಿದವನು

ಜಗದ ಸೌಖ್ಯದ ಸಿರಿಯ ಸವಿಗನಸ ಕಾಣುತ್ತೆ
ಮುದಿಮುದಿಸಿ ನಡೆಯಲ್ಲಿ ನೇಯುವವನು
ಬದುಕಿ ಬಾಳುವ ಆಸೆ ಬಾಳ ಬೆಳಗುವ ಆಸೆ
ಮೈಮೆಯಲಿ ನಿಲುವಾಸೆ ಕಲಿಸುವವನು

—ವಿ. ಸೀ.

# ಮಹಾನುಭಾವ ಬುದ್ಧಗುರು

ಜಗದ್ವಂದ್ಯರಾದ ಮಹಾನುಭಾವರುಗಳಲ್ಲಿ ಶ್ರೇಷ್ಠರೆನಿಸಿದವ ಗುಂಪಿಗೆ ಗೌತಮ ಬುದ್ಧನೂ ಸೇರಿದ್ದಾನೆ. ಸಂಪ್ರದಾಯಕ್ಕಿಂತಲ ಸತ್ಯವು ಹೆಚ್ಚೆಂದು ಭಾವಿಸಬೇಕೆಂದೂ, ಪರಪ್ರತ್ಯಯ ಬುದ್ಧಿಯನ ಬಿಟ್ಟು ಸ್ವಾನುಭವದಿಂದ ತತ್ತ್ವಸಾಕ್ಷಾತ್ಕಾರ ಮಾಡಿಕೊಳ್ಳಬೇಕೆಂದ ಬೋಧಿಸಿದ ಪುಣ್ಯಾತ್ಮನು, ಗೌತಮ ಬುದ್ಧನು. ಶೀಲಶುದ್ಧಿಯನ ಸಂಪಾದಿಸಿಕೊಂಡವರೆಲ್ಲರೂ ನಿರ್ವಾಣ ಸುಖಕ್ಕೆ ಅಧಿಕಾರಿಗಳೆಂದ ಸಾರಿ, ಸ್ವಾತಂತ್ರ್ಯದ ಭೇರಿಯನ್ನು ಮೊಳಗಿಸಿ ಮನುಷ್ಯತ್ವದ ಶ್ರೇಷ್ಠ ಯನ್ನು ಉಚ್ಚಸಿಂಹಾಸನಕ್ಕೇರಿಸಿದ ಮಹನೀಯನು, ಗೌತಮ ಬುದ್ಧನು ಪ್ರಜ್ಞಾಲಾಭವು ಯಜ್ಞಾದಿ ಕರ್ಮಗಳಿಗಿಂತ ಮಿಗಿಲೆಂಬ ಸಿದ್ಧಾಂ ವನ್ನೇ ಹೊಸದೊಂದು ರೀತಿಯಲ್ಲಿ ಬೋಧಿಸಿದ ಮೇಧಾವಿಯು, ಗೌತಮ ಬುದ್ಧನು. ಶುಷ್ಕ ಸಿದ್ಧಾಂತಗಳ ಗಿಳಿಯೋದಿಗಿಂತ ಸಚ್ಚಾರಿತ್ರ ಸಂಪ ದನೆಯು ಶ್ರೇಷ್ಠವೆಂದು ಬೋಧಿಸಿದ ಪಾರದರ್ಶಿಯು, ಗೌತಮ ಬುದ್ಧನು. ಸಚ್ಚಾರಿತ್ರದಿಂದ ಬ್ರಾಹ್ಮಣ್ಯವೇ ಹೊರತು ಕೇವ ಜನ್ಮದಿಂದಲ್ಲವೆಂಬ ಸಿದ್ಧಾಂತವನ್ನು ಪುನರುಜ್ಜೀವನಗೊಳಿಸಿ, ತಾನ ನಿರೂಪಿಸಿದಂತೆ ತನ್ನ ಶಿಷ್ಯರೆಲ್ಲರೂ ಧರ್ಮಾನುಷ್ಠಾನ ಮಾಡಬೇಕೆಂದ ಬೋಧಿಸಿ ಉದಾತ್ತ ಧ್ಯೇಯ ಸಾಧನೆಯ ಸೋಪಾನವನ್ನು ಕಲ್ಪಿಸಿ ಧೀರನು, ಗೌತಮ ಬುದ್ಧನು. ಪ್ರಾಣಿಮಾತ್ರದಲ್ಲಿಯೂ ಪ್ರೀತಿ ಕರು ಗಳನ್ನು ತೋರಿಸಿ ಮೈತ್ರಿಯಿಂದ ಮಜ್ಜನಮಾಡಿಸಬೇಕೆಂದು ತಿಳಿ ಅಹಿಂಸಾಧರ್ಮವನ್ನು ಬೋಧಿಸಿದ ಕರುಣಾಪೂರ್ಣಹೃದಯನು, ಗೌತಮ ಬುದ್ಧನು. ಸ್ವಾರ್ಥಪರತೆಯ ಲವಲೇಶವೂ ಇಲ್ಲದ ತ್ಯಾಗರಾಜನಾಗಿಯ ನಿಷ್ಕಾಮ ಕರ್ಮಿಯಾದ ಕರುಣಾಳುವಾಗಿಯೂ ಕೆಲಸಮಾಡಿ, ಶೀ ಸಂಪತ್ತಿಯನ್ನು ಸಂಪಾದಿಸಿ, ವಿಶ್ವಪ್ರೇಮದ ದಿವ್ಯಪ್ರಭೆಯಿಂದ ಬೋ ಸುತ್ತಿದ್ದ ಮಹಾನುಭಾವನು, ಗೌತಮ ಬುದ್ಧನು. ಆತನನ್ನು ಸ್ಮರಿಸಿ ದಿನವೇ ಸುದಿನವೆಂಬುದನ್ನು ಯಾರು ತಾನೆ ಒಪ್ಪುವುದಿಲ್ಲ?

**—ಸಿ. ಕೆ. ವೆಂಕಟರಾಮಯ್ಯ**

# ಆ ಗುರುದೇವ

ಆ ಗುರುವಾಗಲಿ ಎಂಥ ಗುರು. ಅವನನ್ನು ನೋಡದ ಜನರಿಗೆ ಅಂಥ ಜೀವವಿರಬಹುದೆಂದು ತೋರದು. ನೋಡಿದ ತನಗಾಗಲಿ ಅವನ ಗುಣ ಇಷ್ಟೇ ಎಂದು ಹೇಳುವುದು ಸಾಧ್ಯವೆ? ಆ ಮನುಷ್ಯ ಅಂಥ ದೈವವಾದದ್ದು ಹೇಗೆ? ಅಂದು ತಾನು ವಾರಣಾಸಿಯಲ್ಲಿ ಆತನನ್ನು ನೋಡಿದ ಮೊದಲು ಮಹಾಪರಿನಿರ್ವಾಣದವರೆಗೆ ಆ ಗುರುದೇವನು, ಆ ದೇವತಾಂಶಪುರುಷನು, ಒಂದೇ ಸಮನಾಗಿ, ಯೋಚನೆಯಿಲ್ಲದೆ ಭೀತಿ ಯಿಲ್ಲದೆ, ಆಕ್ರೋಶವಿಲ್ಲದೆ ಅಶ್ರದ್ಧೆಯಿಲ್ಲದೆ, ತಾನೆನ್ನದೆ ತನ್ನದೆನ್ನದೆ, ತಾನು ಹೆಚ್ಚೆನ್ನದೆ ನೀನು ಬೇರೆಯೆನ್ನದೆ, ಸಮಸ್ತ ಭೂತದಲ್ಲಿಯೂ ಏಕ ರೀತಿಯಾದ ಭ್ರಾತೃವಾತ್ಸಲ್ಯವನ್ನು ತೋರಿದನು. ಆ ಗುರು ದೇವರಲ್ಲದೆ ಬೇರೆ ಹೇಗೆ? ಕೃಷ್ಣಾವತಾರ ಆದ ಮೇಲೆ ಈತನೇ ಅವತಾರ. ಇವನೇ ಒಂಬತ್ತನೆಯ ಅವತಾರ. ಇವನು ದೇವರೇ. ದೇವರಲ್ಲದವನಿಗೆ ಆ ನಡತೆ ಬರುವುದು ಹೇಗೆ? ದೇವರಲ್ಲದವನಿಗೆ ಆ ಆತ್ಮಪ್ರತ್ಯಯವೆಲ್ಲಿರು ವುದು? ದೇವರಲ್ಲಲ್ಲದೆ ಆ ಶಾಂತಿಯಿನ್ನೆಲ್ಲಿ? ತಾನು ದೇವರನ್ನು ಕಣ್ಣಾರ ನೋಡಿದ್ದಾಯಿತು. ತನ್ನ ಜನ್ಮ ಸಾರ್ಥಕವಾಯಿತು.

—'ಶ್ರೀನಿವಾಸ'

# ಬುದ್ಧದೇವ

ವಿಕಸಿತ ಸಹಸ್ರದಲ ಪದ್ಮಪೀಠದ ಮೇಲೆ
ಮಂಡಿಸಿಹ ಧವಲಿಮಾ ಧ್ಯಾನಸ್ತಿಮಿತಮೂರ್ತಿ,
ಹೇ ಬುದ್ಧದೇವ, ನಿನ್ನತುಲ ಬುದ್ಧಿಸ್ಫೂರ್ತಿ
ಮಾನವನ ಮೂರ್ಖತೆಯ ದಹಿಸುವ ಮಹಾಜ್ವಾಲೆ.
ಅರ್ಥವಿಲ್ಲದ ಕರ್ಮತತಿಯ ಮರುರಂಗದಲಿ
ಶುಷ್ಕ ಆಚಾರ–ಸೈಕತದಲ್ಲಿ ನಡೆಗೆಟ್ಟು
ನಿರ್ಮಲ ವಿಚಾರ–ನದಿ ಲಯವಾಗುತಿರೆ; ಕಟ್ಟು
ಕಟ್ಟಳೆಯ ಲೌಹ ಶೃಂಖಲೆಯ ಯಮಸಂಗದಲಿ
ಕುಬ್ಜವಾಗುತಲಿರಲು ಧರ್ಮದ ಮಹೋನ್ನತಿಯು,
ವೈರಾಗ್ಯವರ್ಷವನು ಕರೆದು, ಜನರಲಿ ಮತಿಯು
ಶ್ರುತಿಯ ಬಂಡೆಯ ಬಿರಿದು ಮೂಡುವಂತೆಸಗಿರುವೆ.
ಹೇ ಪುಣ್ಯಮತಿಮೂರ್ತಿ, ಮತದ ಮತಿಹೀನತೆಯು
ಸಾಕೆಮಗೆ; ಬೇಕು ಸನ್ಮತಿಯ ನಾಗರಿಕತೆಯು:
ನರನ ಸನ್ಮತಿಗಿಂತ ಬೇರೆಯ ಜಗದ್ಗುರುವೆ?

—ಕೆ. ವಿ. ಪುಟ್ಟಪ್ಪ.

# ಬುದ್ಧ

ನೀನಂದು ಚಿನ್ಮೂರ್ತಿ ಭಾವಸುಪ್ತಿಗೆ ಸಂದು
ಲೀಲೆಯಿಂ ಬಗೆಗೊಂಡೆ ಜಗದ ಜೀವದ ಕನಸ;
ಕಾಲದೇಶವ್ಯಾಪ್ತಿ ಕನಸಿನೊಳು ನಿನಗಾಯ್ತು—
ಆನಂದವೆರಡಾಯ್ತು, ಚಿತ್ತು ಚಿದಚಿತ್ತಾಯ್ತು;

ಒಂದಿರವು ಬಹುವಾಗಿ ಜನ್ಮಮೃತ್ಯುಗಳೆಂಬ
ಹುಸಿಯಾಟ ಮೊದಲಾಯ್ತು; ಸಂಸಾರಿ ನೀನಾದೆ,
ಹಸಿವಾಂತೆ, ತೃಷೆಯಾಂತೆ, ನೇಹ ಮೋಹಗಳಾಂತೆ;
ಬಂಧನವೆ ಸವಿಯೆಂದೆ, ಕನಸನೇ ನನಸೆಂದೆ.

ಹೀಗೆ ಭವಮಾಯೆಯೊಳು ಭೋಕ್ತೃವಾಗಲು ನೀನು,
ನೋವಂಟಿ, ಕಾವೇರೆ, ಧರ್ಮಭಯ ಕರ್ಮಭಯ
ಸಾವಿನತ್ಯುಗ್ರಭಯ, ಚೇತನವ ತಲ್ಲಣಿಸ-
ಲಾಗ 'ದಿಟವೋ?' ಎಂದು ಶಂಕೆಗೊಂಡೆಚ್ಚತ್ತೆ.

ಎಚ್ಚರಲು, ಹೇ ಬುದ್ಧ, ಹಿಂಗಿತಾ ಭವಕ್ರಾಂತಿ:
ನೋವಿಲ್ಲ, ಸಾವಿಲ್ಲ, ಏನಿಲ್ಲ: ಶೂನ್ಯ—ಶಾಂತಿ.

**—ಪು. ತಿ. ನರಸಿಂಹಾಚಾರ್.**

# ಸುಗತ ಸಾಂಗತ್ಯ

ಜೀವಿಯ ಜೀವಿತಕೇನಯ್ಯ ಕುರುಹೆನ-
ಲವ ಗೆಯ್ದ ಗೆಯ್ಮೆಯು ಫಲವಲ್ಲವೆ!
ಭಾವಿಸೆ ಬುದ್ಧನು ಜೀವಿಸಿದ್ದುದಕವನ
ಸವೆಯದ ಸಂಘವೆ ಸಾಕ್ಷಿಯಲ್ತೆ!

ಮಗನಾಗಿ ಮಾಯೆಗೆ ದಯೆಯವತಾರನು
ಸಿದ್ಧಾರ್ಥನೆಂಬಭಿಧಾನದಲಿ
ಜಗದ ದುಃಖವ ಕಂಡು ಮುಕ್ತಿಮಾರ್ಗವನರಸಿ
ಕದ್ದೂರಿನಡವಿಗೆ ನಡೆತಂದನು

ಭೋಗಭಾಗ್ಯದಿನತಿ ಘೋರತಪಂಗಳಿಂ
ಹೊದ್ದದೆ ಬಯಸಿದ ನಿರ್ವಾಣವ
ಸಾಗದು ಯಾವುದುಮತಿಯಾದರೆಂದೆದ್ದು
ಮಧ್ಯಮಾರ್ಗವನನುಸರಿಸಿದನು

ಬೋಧಿದ್ರುಮದ ಕೆಳಗೇಕಚಿತ್ತದಿನಿದ್ದು
ಮರ್ದಿಸಿ ಮಾರನ ಮಾರ್ಬಲವ
ಸಾಧಿಸಿ ಸಮ್ಯಕ್‌ಸಂಬೋಧಿಯನೆ ಸಂ-
ಬುದ್ಧನಾದನು ನಮ್ಮ ಗೌತಮನು

ದುಃಖ ದುಃಖದಮೂಲ ದುಃಖನಿರೋಧವು
ದುಃಖನಿರೋಧದ ಮಾರ್ಗವೆಂಬ
ಎತ್ತಿದ ನಾಲ್ಕಾದ ಆರ್ಯಸತ್ಯಗಳನ್ನೆ
ಬಿತ್ತರಿಸಿದನಂದು ಸಂಬುದ್ಧನು

ತಿಂಗಳು ಚಂದಿರಗಿಂಚರ ವೀಣೆಗೆ
ವಿಕಸಿತ ಕುಸುಮಕೆ ಕಂಪೆಂತುಟು
ಮಂಗಳರೂಪನಭಂಗನು ಬುದ್ಧನಿ
ಗಕಲಂಕಗಂತುಟೆ ಧರ್ಮವೈಸೆ!

ಸೊಲ್ಲಿಸಿ ತನ್ನರಿತ ಧರ್ಮವನೆಲ್ಲರಿ-
ಗಿಕ್ಕುತ ಹೆಜ್ಜೆಯನೆಲ್ಲೆಡೆಗು
ಎಲ್ಲ ದಾನಗಳನ್ನು ಧರ್ಮದಾನವದೊಂದೆ
ಇಕ್ಕಿ ಮೆಟ್ಟುವುದೆಂದು ತೋರಿದನು.

ಪದ್ಮಪತ್ರಾಶ್ರಿತ ಜಲಬಿಂದುವಂತೆವೊ-
ಲೀಸುತ ಸಂಸಾರ ನಾಗರವ
ಹೊದ್ದಿದನಕಳಂಕ ವೀತರಾಗನು ತಾನು
ಮಾನದ ಪರಿನಿರ್ವಾಣವನು

—ರಾಜರತ್ನಂ

# ಸಿದ್ಧಾರ್ಥ

ನಾದನಾಮಕ್ರಿಯೆ

ನಡೆ ಹಯುವೆ ನಡೆ ಮುಂದಕೀಗ!
ಸಾರವಿಲ್ಲದ ಸುತ ಸತೀ ವ್ಯಾಮೋಹದಿಂ ದೂರ
ಸಾರಿ ಹೋಗುವ ನಾವು ಮುಂದಕೀಗ—||

ನಡುರಾತ್ರಿ ಮೀರಿಹುದು ಜಗ ನಿದ್ರಿಸುತ್ತಿಹುದು
ಗಡಿನಾಡುಗಳ ದಾಂಟಿ ದೂರ ಸಾರುವೆವು
ತಡೆಯುವಿನ್ನೆನ್ನನೀ ರಾಜ್ಯಸುಖದಾಸೆಗಳು
ನಿಡು ಕಾಡುದಾರಿಗಳ ಹಿಡಿದು ನಡೆ ಹೋಗು.

ತಿರುತಿರುಗಿ ಎನ್ನ ಮೊಗ ನೋಡದಿರು ಬೇಡದಿರು
ಕೊರಗದಿರು ಮರುಗದಿರು ಎನ್ನ ಸಲುವಾಗಿ
ಅರಿವಿನಾ ಮಾರ್ಗವಿದು ಪರದ ಸನ್ಮಾರ್ಗವಿದು
ಧರೆಯ ದುಃಖದ ಭಾರವಿಳಿಪ ಮಾರ್ಗವಿದು

ಜನರು ಸುಳಿಯುದಗವ್ಯ ಕಾನನವ ಸೇರುತ್ತೆ
ವನದ ಏಕಾಂತದಲಿ ಶಾಂತಿಯಾರ್ಜಿಸುವ,
ಮನವನೊಮ್ಮೊನೆಯಲ್ಲಿ ನಿಲಿಸಿ ಜಾನಿಸುತಲ್ಲಿ
ಗಹನ ತತ್ತ್ವರಹಸ್ಯವರಿಯುುತಾನಂದಿಸುವ

ವಿಶ್ವಹೃದಯುವನಿರಿದ ವಿಷಬಾಣವೀ ವಿಧಿಯ–
ಸಹ್ಯ ಹಿಂಸೆಯನಿತ್ತು ಪೀಡಿಸುತ್ತಿಹುದು ;
ಸ್ವಸ್ಥಚಿತ್ತದೊಳಿನ್ನು ಎಂತು ತಾಳುವುದಿದನು
ಅಶ್ವವರ ತಡವೇಕೆ ದೃಢವ ಕಂಡಿರುವೆ.

ಅರಿದ ಬಳಿಕೀಯೆನ್ನ ಧರೆಗೆ ಹಿಂದಿರುಗುತ್ತೆ
ನರರ್ಗೆ ಬಳಲಿದವರ್ಗೆ ದಾರಿ ತೋರುವೆನು;
ಉರಿಯುತಿದೆ ಈ ಒಡಲು ನೆನೆನೆನೆದು ಹಿಂಸೆಗಳ
ದಯೆಯಹಿಂಸೆಯ ಧರ್ಮವಿವರ ಹೇಳುವೆನು

—ವಿ. ಸೀ.

# ಬೋಧಿವೃಕ್ಷ

ಅರಸೊತ್ತಿಗೆಯ ತುಳಿದು ಸಂಸಾರಸುಖ ಕಳೆದು
ಭೀಕರದ ಕಾನನವ ಸೇರುತಿಹನು
ಕಾಡು ಕಲ್ಮುಳ್ಳುಗಳು ಹಿಂಸ್ರಪಶು ಕೂಗುಗಳು—
ಬಾಡಿಸುವ ಬಿಸಿಲ ಜಳಕಂಜದಿಹನು

ಮನವ ಕೊರೆಯುವ ಚಿಂತೆ ಒಡಲ ಕೊಡಹುವ ಬೇನೆ
ಬಿಡದೆ ತಂದಿಹುದೆಲವೊ ಘೋರ ವನಕೆ.
ಕತ್ತಲೆಯ ಕಾಡೊಳಗೆ ಮೊದಲೆ ಬೆಂದಿಹ ಮನವು
ಮತ್ತಷ್ಟು ತಮದಿಂದ ಬೇಯದೇನು?

ಕಳೆದು ನೀಗುತಲಿಹನು ಸಿಂಗರದ ತೊಡಿಗೆಗಳ
ಕಳೆದುದಾಯಿತು ಸಕಲ ವಿಭವಚಿಹ್ನೆ
ಬೋಧಿವೃಕ್ಷದ ಕೆಳಗೆ ಕುಳಿತ ಸಿದ್ಧಾರ್ಥನದಿ
ಸಂಸಾರವನು ಮರೆವ ತಪದಿ ಮುಳುಗೆ.

ಏನು ನಿಜವನು ಕಾಂಬ ಹಟವ ತೊಟ್ಟಿಹನಿವನು!
ಏನು ಗಳಿಸುವನಿಲ್ಲಿ ಕಾಣೆ ನಾನು!
ಏನಿದುವೆ ಸೋಜಿಗವು! ಏನಿದುವೆ ವೈರಾಗ್ಯ!
ಆವರಿಸಿ ಬಂತವಗೆ ಭಾವನಿದ್ರೆ!

ಅರರೆ ಏನಿದು ಸದ್ದು? ಅರರೆ ಏನಿದು ತಮವು?
ಭೀತಿಯನು ಮೊರೆದಿಡುವ ಕ್ರೂರಿಯಾರು?
ಭಾವನಿದ್ರೆಯೊಳಿರುವ ಜೀವ ದೇವನದಾರು
ಯಾವ ಉರಿ ಸಾಧಿಸಲು ಕಾಡುತಿಹನು?

ಈ ಘೋರ ರೂಪವೇನೀಭಾರಿ ಹಟವೇನು?
ಕ್ರೂರ ದೃಷ್ಟಿಯನಿಟ್ಟು ಕೊರೆವುದೇನು?
ಯಾರಿವನು ಸಜ್ಜನರ ಪ್ರಾಣ ತಿನ್ನಲು ಬರುವ?
ಹೀನ ಆಸೆಯು ವಶುವು ಬೇಕದೇನು?

ಕಾಂಚನದ ಮಳೆಗರೆವ, ಕಾಮಿನಿಯ ಕಾಣಿಕೆಯ
ಕಾಮನರಗಿಣಿ ಮರೆತ ಯೋಗಿಗೀವ
ನಿಜಕಿವನು ಮಾರನೈ, ಹೀನರೊಳು ಹೀನನೈ,
ಪರಿಪರಿಯ ಮಾಟದಾ ಆಟಗಾರ.

ಜಾರುವುದು ಮಮ ಹೃದಯ, ಸೋರುವುದು ಎದೆ ಧೈರ್ಯ
ಧರಧರಿಪುದೆನ್ನ ಪ್ರೈಕೂದಲುಗಳು.
ಮಾಯದಿದು ಸುಳಿಗಾಳಿ ಭೋರ್ಗರೆವ ಬಿರುಗಾಳಿ!
ಹಾಳುಗೆಡೆವುದೆ ಎನ್ನ ಕವಳಿಗಿಡವ?

ಏನು ಧೃತಿಯಿದು? ನಾನು ಕದಳಿಗಿಡವೆಂದೊರೆದೆ —
ಕದಳಿಯಲ್ಲಿದು ನೋಡು, ವಜ್ರಕಂಭ!
ಬಂದಿರುವ ಬಿರುಗಾಳಿ ಮೆಯ್ಯ ದೂಳನು ಬೀಸಿ
ಬಂದಂತೆ ಮರಳುತಿದೆ ಬೆದರಿ ಚೆದರಿ.

ಮಾರ ಬಂದನು, ಇದಿರು ನಿಲ್ಲಲಾರದೆ ತನ್ನ
ಸೋಲ ಚೀಲವ ಹೊತ್ತು ಓಡಿಹೋದ.
ಇನ್ನೇನು ಏ ತವಸಿ? ಏಳಬಾರದೆ ನೀನು?
ಏಳು ವತ್ಸರ ನಂತು. ಏಳು! ಏಳು!

ಬೆಳಗಾಯ್ತು ನೋಡಲ್ಲಿ, ನವಸೂರ್ಯನುದಯಿಸಿಹ,
ಹಕ್ಕಿಗಳು ಹಾಡುತಿವೆ ಉದಯರಾಗ.
ನವಯುಗವು ನವಕಾಲ ನವಜೀವ ಬಂತೆಂಬ
ನವಸಂಪದದ ಒಸಗೆ ಹೊತ್ತು ತಂದು.

ನಿಜವಯ್ಯ, ನಿಜವಯ್ಯ, ಭಾವಯೋಗಿಯ ನೋಡಿ!
ಮುಖದ ಮೊಗ್ಗೆಯು ಮೆಲ್ಲನರಳುತಿಹುದು.
ಕಾಂತಿಮಯ ನಯನದಿಂ ನವಕಿರಣಗಳು ಬೆಳಗಿ
ಮಂದಹಾಸಾಮೃತವು ಸುರಿಯುತಿಹುದು.

ಆಳವನು ಅಳಿದನೈ! ಆಳಾಗಿ ನಿಂತನೈ!
ಹಾಳು ಸಂಸಾರಕ್ಕೆ ಸಲಿಸೆ ಅಭಯ.
ಮನವಿದುವೆ ಉಕ್ಕುತಿದೆ, ಮೈಯಿದುವೆ ಉಬ್ಬುತಿದೆ,
ವನದ ಬಂಧವ ಬಿಟ್ಟು ಮುಂದೆ ಬರುವ!

ಬೋಧಿವೃಕ್ಷವೆ, ನೀನು ಧನ್ಯರೊಳು ಧನ್ಯನೈ!
ಬುದ್ಧದೇವನನಿತ್ತೆ ಬದ್ಧ ಜಗಕೆ.
ಆನಂದವಾನಂದ ನಿಶ್ಚಯಕು ಬರಲಿಹುದು
ಆನಂದ ಸಂದೇಶ ನಿನ್ನ ಗುರಿಯು.

—ಶಿವರಾಮ ಕಾರಂತ

# ಬುದ್ಧನ ಉಪದೇಶ

ಒಳಗೆ ಬೆಳಗುವ ಬೆಳಕ ಸರಿಪಡಿಸಿಕೊಳಬೇಕು.
ಬಡವನಿಗೆ ಮನೆಯೊಳೇ ನಿಧಿಯೊಂದ ಹುಗಿದಿಟ್ಟು
ಎಲ್ಲಿರುವುದೆಂದು ಹೇಳಿದ ರೀತಿ, ಮನುಜನಿಗೆ
ಅವನೊಳಗೆ ನಿಲಿಸಿರುವ ಬುದ್ಧಿ. ಆದರಿಂದವನು
ಒಳಗಿರುವ ಅರಿವ ಶಕ್ತಿಯ ಆಳವನಾರೈಸಿ
ಹಿರಿದಾಗುವಂತೆಸಗಬೇಕು. ತಿಳಿವಿನ ಚಿಲುಮೆ
ಅನುದಿನದ ಸುಖದುಃಖದಿಂದ ಬಗ್ಗಡವಾಗಿ
ಕೆಡುತಿರಲು ಸಾವಧಾನದಿ ಮನವ ನಿಲ್ಲಿಸುತ
ಕದಡು ತಳಕಿಳಿವಂತೆ ಭಾವ ತಿಳಿಯಪ್ಪಂತೆ
ಶಾಂತ ಚಿತ್ತವನು ಸಾಧಿಸಬೇಕು. ಇದುವೆ ತಪ,
ಇದೆ ಧರ್ಮ, ಇದೆ ಯಾತ್ರೆ, ಇದೆ ಮುಕ್ತಿ, ಕಲ್ಯಾಣ.
ಈ ಸ್ಥಿತಿಯ ಸಾಧಿಸಲು ಎಲ್ಲರೂ ತೊಡಗುವುದು.
ಎಲ್ಲರೂ ಈ ಸ್ಥಿತಿಯ ಪಡೆಯೆ ಯತ್ನಿಸಬೇಕು.
ಅರಿಯದವ ನಾನು, ಅಲ್ಪನು, ಕಿರಿಯವನು, ನನಗೆ
ಇದು ಸಾಧ್ಯವೇ ಎಂದು ಸಂದೇಹಪಡಬೇಡ.
ಒಳ್ಳಿದನು ಮಾಡುವೆನು ಎಂದು ಯತ್ನಿಪವನಿಗೆ
ವಿಶ್ವವೇ ನೆರವಾಗಿ ನಿಲ್ಲುವುದು. ಸೃಷ್ಟಿಯಲಿ
ಶುಭವ ಸಾಧಿಸುತಿರುವ ಪರಶಕ್ತಿ ಯಾವುದೋ
ಅದು ಅಂಥ ಮಾನವನ ಹೃದಯದಲಿ ಮನೆಮಾಡಿ
ಅವನು ನೆನೆಯದ ಮಹಾಕಾರ್ಯಗಳನವನಿಂದ
ನಡೆಯಿಸುವುದು; ಅವನನುದ್ಧಾರಮಾಡುವುದು;
ಲೋಕಕಲ್ಯಾಣವನು ಅವನಿಂದ ತರಿಸುವುದು.
ನಿಂತಿರುವ ನೆಲೆಯಿಂದ ತಪದ ಶಾಂತಿಯ ನೆಲೆಯ
ದೂರವನು ನೋಡಿ ಭಯಪಡಬೇಡ: ಬಾಲಕನು
ಅಕ್ಷರವ ಕಲಿಯತೊಡಗಿದ ವೇಳೆ ವೇದಾಂತ
ಎನಿತು ದೂರವೊ ಎಂದು ಭಾವಿಸಲು ಫಲವೇನು?

ತಪದ ಫಲ ಕಣ್ಣಿಗೇ ಕಾಣದಿದೆ, ಬರಿಮಾತು
ಎಂದು ವಿಚಿಕಿತ್ಸೆಯಲಿ ಮನವ ಕುಂಠಿಸಬೇಡ:
ತೀರದಲಿ ನಿಂತು ಸಾಗರವ ನೋಡುವ ಕಣ್ಗೆ
ಒಂದೆ ಹರಿದಾರಿ ನೀರಿನ ಹರಹು ಕಾಣುವುದು.
ನಾವೆಯಲಿ ಕುಳಿತು ಮುಂಬರಿದು ಹೋದಂತೆಲ್ಲ
ಹರಿದಾರಿ ಹರಿದಾರಿ ಎದುರುಗೊಳ್ಳುತ ಬಹುದು.
ಸಾಧಕನು ಹಿಂದಣಜ್ಞಾನವನು ಮನಗಂಡು
ಇನ್ನು ಸಾಧನೆಯಿಲ್ಲವೆಂದು ನೆನೆವುದು ಬೇಡ;
ಹಿಮಗಿರಿಯನೇರುವನು ಹಿಂದಿರುಗಿ ನೋಟವನು
ಬಯಲಮೇಲ್ಹಾಯ್ಸಿ ಆಹಾ ಎನಿತು ಏರಿದೆನು
ಇನ್ನು ಏರುವ ಕೆಲಸವಿಲ್ಲ ಎನೆ ಫಲವೇನು?
ಅವನ ಗೆಯ್ತಕೆ ಕಾದ ಕೆಲಸ ಹಿಮಗಿರಿಯಾಗಿ
ಅವನ ಹಿಂಗಡೆಯಲೇ ಓಟ್ಟೈಸಿ ನಿಂತಿಹುದು.
ಸಾಧಿಸಿದೆನಾನೆಂಬ ಅಭಿಮಾನವೂ ಬೇಡ;
ಬೇಡ ನಾನಲ್ಪನೆಂಬಭಿಮಾನ ವಿಪರೀತ;
ಬೇಡ ಸಾಧನೆಯ ಪಥವಿಹುದರಲಿ ವಿಚಿಕಿತ್ಸೆ;
ಅವನವನು ತನ್ನ ಸದ್ಯಃಸ್ಥಿತಿಯ ನೆಲೆಯಿಂದ
ತನ್ನ ತಾನೇ ತಿದ್ದಿಕೊಳಲು ಯತ್ನಿಸಬೇಕು.
ಅಲ್ಪನಾನೆಂಬವನು ತಾನೆ ಹಿರಿದಾಗುವನು;
ತನ್ನ ಪಥವನು ತಾನೆ ಕಾಣುವನು; ಕಂಡುದನು
ಸಾಧಿಸುತ ಮುಂದೆ ನಡೆವನು; ಮುಂದೆ ನಡೆ ನಡೆದು
ತಾ ಮುಕ್ತನಾಗುವನು; ಅಂತೆಯೇ ಆ ತಾನು
ಲೋಕಗಳ ಕಲ್ಯಾಣದಾವಾನವಾಗುವನು.

ನಾನು ಅಲ್ಪನು ಎಂದ ಮಾನವನು
ಲೋಕಗಳ ಕಲ್ಯಾಣದಾವಾನವಾಗುವನು.
ಆಗ ಅಲ್ಪನು ಎಂದು ಹಳಿವುದಕೆ ಕೂಡ
ತಾನು ತನ್ನವನಲ್ಲವೆಂದವನು ಅರಿಯುವನು.

ತಾನೆಂಬದುಂಟು: ವಿಶ್ವದ ಒಡವೆಯಾಗಿ;
ತನ್ನೊಡವೆಯಾಗಿ ಇಲ್ಲ. ತಾನು ಎನ್ನುವುದು
ವಿಶ್ವಜೀವದ ವಟವೃಕ್ಷದಾನಂತ್ಯದಲಿ
ಏನೊಂದು ಕಣವಾಗಿ, ಬೇರಿನಲಿ ತಾಳಿನಲಿ
ಶಾಖೆ ಉಪಶಾಖೆಯಲಿ ಕಾಂಡದಲಿ ಎಲೆಗಳಲಿ,
ಎಲ್ಲಿಯೋ ಅಲ್ಲಿ ಬೆರೆತಿರುವುದು; ತಾ ತನ್ನ
ಅರಿತಿರುವುದು; ಅಂತೆ ಮರೆತಿರುವುದು. ನಾನು
ನಾನು ನಾನು ನಾನು ನನ್ನದಿದು ನನ್ನದದು
ಎಂಬ ಅತಿ ಮಮತೆಯುರುಮುರುಳುತನದಲಿ ಜೀವ
ಈ ಮರದ ಶಾಖೆಯಲಿ ಕಾಣ್ಬ ಕರುಟಂತಹುದು;
ತನ್ನೆಡೆಗೆ ಬಂದ ರಸವನು ಲೋಭದಲಿ ಹೀರಿ
ತನ್ನ ಸುತ್ತಲೆ ರಕ್ಷೆಯೊಂದು ರೇಖೆಯ ಹಾಕಿ
ತಾಯಿ ತರುವಿನ ಬಾಳಿನಿಂದ ಬೇರೆಯದಾಗಿ
ಕೆಟ್ಟುಹೋಗುವುದು. ತನ್ನೆಡೆಗೆ ಹರಿದೈತಂದ
ಜೀವರಸದಲಿ ಸುಖಿಸಿ ಮುಂದೆ ಅದ ಹರಿಯಬಿಡೆ
ತಾನೂ ಸುಖವನುಂಡು ತಾಯಿ ತರುವಿನ ಬಾಳು
ಹಸನಾಗಿ ಬೆಳೆವಂತೆ ಸಾಹಾಯ್ಯ ಮಾಡುವುದು.
ಲೋಕಕಲ್ಯಾಣವನು ಸಾಧಿಸುವ ಮಾನವನು
ತಾನೆಂಬುದೊಂದು ಬರಿಮಾಯೆ ಎಂದೆನಬೇಡ;
ಸತತವೂ ಬೆಳೆಯುತಿಹ ಹಿರಿದೊಂದು ಬಾಳಿನಲಿ
ತಾನಿಂದು ಒಗೆದಿಹೆನು, ಮುಂದೆ ಏನಾಗುವೆನೋ
ಅದನು ಆ ಸತತವೂ ಬೆಳೆವ ಬಾಳರಿತಿಹುದು,
ಆ ಕ್ಷಣದೊಳಿಲ್ಲಿ ನನ್ನಿಂದ ಒಳಿತಾಗಲಿ,
ನನ್ನಿಂದ ನಾಲ್ಕು ಜೀವಕೆ ಸೌಖ್ಯ ದೊರೆಯಲಿ,
ನಾನೆಂಬುದಿಂತು ಸಾರ್ಥಕವಾಗಲಿ, ಎಂದು
ಸತತವೂ ಪರಹಿತವ ಸಾಧಿಸುತಲಿರುವುದು.
ಸ್ವಸ್ತಿರಸ್ತು, ಸ್ವಸ್ತಿರಸ್ತು, ಶುಭಮಸ್ತು.

—'**ಶ್ರೀನಿವಾಸ**'

# ಶ್ರೇಷ್ಠ ಭಿಕ್ಷ

“ಎದ್ದು ಮಾತಾಡಿರಿ ಎಚ್ಚೆತ್ತು ಕುಳಿತವರು
ಬುದ್ಧದೇವನಿಗಾಗಿ ಭಿಕ್ಷವೆತ್ತಲು ಬಂದೆ”—
ನಿದ್ದೆ ಕವಿದಾ ಪುರದೊಳನಾಥಪಿಂಡನು ತಾನು
ಇದ್ದು ಕೂಗಿದನಂದು ಬೀದಿಬೀದಿಯಲಿ

“ಆಗಸದ ಮೋಡವು ಬಾಗಿ ಮಳೆಯನು ಸುರಿಸಿ
ಸೋಗಿನಿಂದೀವುದು ನಿಜನಾಶವರಿತು
ಭೋಗದಲಿ ಮನವಿಡದೆ ಬಾಗಿ ನಡೆಯಿರಿ ನೀವು
ತ್ಯಾಗವೆಂಬುದು ಶ್ರೇಷ್ಠ ಧರ್ಮ ಧರ್ಮದಲಿ”

ಎನುವ ಕೂಗನು ಕೇಳಿ ಶ್ರಾವಸ್ತಿ ಪುರವೆಲ್ಲ
ತನುಮನದೆ ಎಚ್ಚೆತ್ತು ಹೊರಹೊರಟಿತು
ಮನದಿಷ್ಟದಲಿ ರತ್ನಧನವಸ್ತ್ರಗಳನೆಲ್ಲ
ಮುನಿಯ ಮುಂದಿಟ್ಟರು ಬಾಗಿ ಬಾಗುತಲಿ

ದಿನಮಣಿಯು ಎಚ್ಚೆತ್ತು ನಸುನಕ್ಕು ನೋಡಿದನು
ಧನಸುಖವು ಸುಳ್ಳೆನುತ ನಡುಗೆ ಶ್ರೀಮಂತರು
ಮನವರಿದು ತಿಳಿಯದೆಲೆ ಅಳಲು ಬಾಲೆಯರು
ಧನವಸ್ತ್ರಗಳನುಳಿದು ಹೊರಟನಾ ಭಿಕ್ಷು

“ಭಿಕ್ಷುಶ್ರೇಷ್ಠನು ತಾನು ಬುದ್ಧ ಭಗವಾನನು!
ಭಿಕ್ಷಶ್ರೇಷ್ಠವ ತನ್ನಿ ಬುದ್ಧಿಯಲಿ ತಿಳಿದು!”
ಭಿಕ್ಷು ಕೂಗುತ ಹೊರಟ ಕಕ್ಷ ಬರಿದಾಗಿರಲು
ಶಿಕ್ಷೆಯೆನುತಲಿ ಪುರವು ದುಃಖಿಸಿತು ದುಃಖಿಸಿತು

ಪುರದ ಹೊರಗಾಗಲು ಬಿಸಿಲೇರೆ ಝುಳವೇಳೆ
ಮರಮರದ ನೆರಳೆಲ್ಲ ಮರೆಮಾಡೆ ಬೇರುಗಳ
ತಿರುತಿರುಗಿ ಭಿಕ್ಷುವು ಕಂಡ ಕಾಡಿನಲಿ
ಸರಿಯಿಲ್ಲದೇಕಾಕಿ ನಾರಿಯೊರ್ವಳನು

ಚರಣದಲಿ ತಲೆಯಿಟ್ಟು ತಿರುಕಳಾಕೆಯು ಹೊರಟು
ಮರದ ಹೊಳ್ಳನು ಸೇರಿ ಹರಕು ಸೀರೆಯ ಬಿಚ್ಚಿ
ಕರವ ನೀಡುತ ಹಿಡಿದು ಹಿಡಿಯೆನುತ ಕೊಡಲಾಗ
ಪರಮ ಸಂತೋಷದಲಿ ಭಿಕ್ಷು ಭಿಕ್ಷವ ಹಿಡಿದ

ಹರಕು ಸೀರೆಯ ಭಿಕ್ಷು ಶಿರದೊಳೊಪ್ಪಿಡುತ
ಹೊರಟನಂದಂದದಲಿ ಚರಣಕೊಪ್ಪಿಸಲು
ಬುದ್ಧದೇವನಿಗಾಗಿ ಸಿದ್ಧಿಸಿತು ಭಿಕ್ಷೆ
ಎದ್ದು ಸಾರ್ಥಕವೆಂದ ಇಂದು ಈ ಸುದಿನ

— ಹೊಯಿಸಳ

# ಮೂಲ್ಯಪ್ರಾಪ್ತಿ

ಮಾಗಿಯ ರಾತ್ರಿಯೊಳಿಬ್ಬನಿಯೇಟಿಗೆ
ನಾಗಿರೆ ಬಾಡುತ ತಾವರೆಯೆಲ್ಲಾ

ಸಾಕಿದ್ದನೊರ್ವ ಹೂವಾಡಿಗನಾಗ
ಬೇಕಾದ್ದನೊದಗಿಸಿ ತಾವರೆಯೊಂದ

ಕಂಡು ಸುದಾಸನು ತನ್ನ ತಾವರೆಯ
ಕೊಂಡೊಯ್ವೆನಿದನೆಂದ ರಾಜನ ಬಳಿಗೆ

ಎಂದೆಂದು ಭಾವಿಸಿ ಕುಸುಮವನೆತ್ತಿ
ಅಂದು ಕೊಂಡೊಯ್ಯಲು ರಾಜವೀಥಿಯಲಿ

ಕಂಡಿದ ದೂರದ ದಾರಿಗನೊರ್ವ
'ಕೊಂಡುಕೊಳ್ಳುವೆನಿದ ಬೆಲೆಯೇನು?' ಎನಲು

ಮಾಶವೊಂದಿದಕೆ ಬೆಲೆಯೆಂದ ತಾನು
ಆಶೆಯುಪಟ್ಟನು ಬಂಗಾರಕೆಂದು

ಮಂಗಳವಾದ್ಯವು ಮೊಳಗುತಲಿರಲು
ಮಂಗಳಮೂರ್ತಿಯ ದರುಶನಕೆಂದು

ಆಗಲ್ಲಿ ಬಂದನು ಬಹುಮೂಲ್ಯದರ್ಘ್ಯವ
ನಾಗಿಸುತಾಗ ಪ್ರಸೇನರಾಜೇಂದ್ರ

'ತಾವರೆಯ ತಾರಿಲ್ಲಿ, ಬೆಲೆಯೇನು ಇದಕೆ?
ನಾವರಿದುದಿಲಿದಕಾಲದ ಕಮಲ'

ಎನುತಲಿ ರಾಜೇಂದ್ರ ಕೇಳೆ ಸುದಾಸ
'ಅನುಮಾನವಿಲ್ಲಿದಕೆ ಬೆಲೆಯೊಂದೆ ಮಾಶ

ಇವನೀತ ಕೇಳಿಹನು ಇಲ್ಲಿ ಪ್ರವಾಸಿ
ಅವನೀಗ ಮಾಶ ಬಂಗಾರವ ಕೊಡುವ'

ಎನುತ ಹೂವಾಡಿಗ ಹೇಳಲು ರಾಜ
ಮನವೊಪ್ಪಿ 'ಹಿಡಿ ಹತ್ತು ಮಾಶವ'ನೆಂದ

'ಇಪ್ಪತ್ತು ಕೊಡುವೆನು' ಎಂದ ಪ್ರವಾಸಿ
'ಒಪ್ಪಿದೆ ನೂರಕೆ ಕೊಡು' ಎಂದ ರಾಜ

ಆರಾರು ಸೋಲದೆ ಬೆಲೆಯೇರುತಿರಲು
ತೋರಿತು ಮನಕೊಂದು ಯೋಚನೆಯವಗೆ

'ಯಾವಾತಗೋಸುಗವೀ ಜನರಿಂದು
ತಾವರೆಯಿದನೊಯ್ಯಲಾಶಿಸುತಿಹರೊ

ಹೋಗುವೆನಾ ಬುದ್ಧನಲ್ಲಿಗೆ ನಾನು
ಮಾಗಿಯ ಹೂವಿಗೆ ಬೆಲೆ ಭಾಳವೆನುವೆ

ಭಾಳ ಬಂಗಾರವ ಮನುಜೇಂದ್ರನೀವ
ತಾಳದೆ ತಾನಲ್ಲಿಗೋಡುವೆ' ನೆಂದ

ವನವನ್ನು ಬೆಳಗುತ್ತ ಮನುಜೇಂದ್ರನಿರಲು
ಮನಮನದಲ್ಲವನ ಶಾಂತಿಯ ಸೊಬಗ

ನೋಡುತ ನಿಂತ ಶಿಲಾಮಯಮೂರ್ತಿ
ಯಾಡದೆ ಕಣ್ಣವೆ ನಿಂತ ಸುದಾಸ

ಹೂವಾಡಿಗನಂದು ತಾವರೆಯೊಯ್ದು
ಭಾವಭಾವವ ಮರೆತು ನಮಿಸಿದನವಗೆ

ಪಾದಕೆ ಮುತ್ತಿಟ್ಟು ದೂಳುಂಡ ನರನ
ಮೋದದಲೆತ್ತುತಲಾಸೆಯೇನೆನುತ

ಕೇಳಲು ಬುದ್ಧ ಸುದಾಸನು ಆಗ
ಹೇಳಿದನಾತನು ಕಣ್ಣೀರ ಸುರಿಸಿ

'ಕಣವೊಂದ ಪಾಲಿಸೆ ಪಾದಧೂಳಿಯಲಿ
ಮನದಿಷ್ಟ ಸಂದಿತು'ಯೆಂದ ಸುದಾಸ

—ಹೊಯಿಸಳ

## ಅಭಿಸಾರ

ಮನೆಮನೆಯಲಿ ದೀಪವಾರುತ ಬರಲು
ಮನುಜರ ದನಿಯೆಲ್ಲವಡಗುತಲಿರಲು
ಅನುವಿಂದ ಮಧುರೆಯು ನಿದ್ದೆಯೊಳಿರಲು
ಮುನಿಯುಪಗುಪ್ತನು ಊರಾಚೆ

ಮುನಿಯುಪಗುಪ್ತನು ಊರಾಚೆಯಿರುತ
ಮನವಿಟ್ಟು ಗೋಡೆಯ ಬುಡದಲ್ಲಿ ಬರುತ
ತನುವನು ಒರಗಿಸಿ ಮಲಗಿ ಸತ್ವರಿತ
ಮುನಿಯುಪಗುಪ್ತನು ಊರಾಚೆ

ನಡುರಾತ್ರಿಯೊಳು ಗೆಜ್ಜೆಕಾಲಿನ ಏಟು
ಉರದೊಳು ಬೀಳಲು ಮುನಿಯೆದ್ದು ಕುಳಿತ
ಪುರದೊಳು ಕಂಡನು ಮಧುರೆಯ ನಟಿಯು
ಪುರಕೆಲ್ಲ ಹೆಚ್ಚಿನ ವಾಸವದತ್ತ

ನವನವ ಯೌವನ ಹೊಳೆಯುತಲಿಹುದು
ಇವನೀತನೊರಗಿಹ ಭೂತಲದಲ್ಲಿ
ಇವನಾರೊ ಮುನಿಯೆಂದು ವಂದಿಸಿ ನಟಿಯು
ಅವಮಾನ ಮಾಡಿದೆ ಕಾಣದೆಲೆ

ಕಾಣದೆಯವಮತಿಯಾಯಿತು ಕ್ಷಮಿಸು
ಆಣೆಯೆನ್ನಾಣೆಯು ಕಾಣದೆ ಮಾಡಿದೆ
ಏಣಾಕ್ಷಿ ಬಾರೆನ್ನ ಮನೆಗೆಂದು ಬೆಸಸೆ
ಕಾಣುವೆನೆಂದ ಸಕಾಲದಲಿ

ಮಧುಮಾಸ ಬರಲೆಂದು ಮಧುವನಕೆಂದು
ಮಧುರೆಯ ಜನರೆಲ್ಲ ಸಾರಿರಲೆಂದು
ಮಧುಮುನಿಯುಪಗುಪ್ತನೂರೊಳಗೆಂದು
ಮಧುರೆಯ ನಟಿಯರ ಕೇರಿಯೊಳು

ನಟಿಯರ ಕೇರಿಯೊಳುಪಗುಪ್ತನೆಂದು
ವಿಟನಂತೆ ಪೋಗುವ ಪರಿಯೇನು ಎಂದು
ಹಟಮಾಡಿ ಕೂಗಲು ಕೋಗಿಲೆಯೆಂದು
'ವಿಟಮುನಿ!' ಎಂದ ಪೂರ್ಣೇಂದು.

ಹೊರಟನು ಉಪಗುಪ್ತನಭಿಸಾರಿಯಾಗಿ
ಹೊರಗಿನ ಗೋಡೆಯ ಮೇಲೆ ತಾ ಬಾಗಿ
ಮರಗಳ ನೆರಳೊಳು ಭೂತಳದಲ್ಲಿ
ನರಳುತಲೊರಗಿದ ನಟಿಯನ್ನು

ನರಳುತಲೊರಗಿದ ನಟಿಯನ್ನು ಕಂಡು
ಭರದಲ್ಲಿ ಬಳಿಗೆದ್ದು ಸಾರಲು ಕಂಡ
ಪುರದಲ್ಲಿ ಮಾರಿಯುಪದ್ರವವುಂಡ
ಪುರಕೆಲ್ಲ ಹೆಚ್ಚಿನ ವಾಸವದತ್ತ

ಮಾರಿಯುಪದ್ರವ ಮೈಯೆಲ್ಲ ಹುಣ್ಣು
ನಾರಿಯನೆತ್ತುತ ತೊಡೆಯೊಳಗಿರಿಸಿ
ನಾರಿಯ ಮೈಗೆಲ್ಲ ಚಂದನ ಬಳಿಯೆ
ನಾರಿಯು ಕಣ್ದೆರೆದು ನೋಡಿದಳು

ಆಗಲೆ ನಾರಿ ಕಣ್ಣಿಟ್ಟು ನೋಡಿ
ಆಗದ ಕಾಲಕ್ಕೆ ಆಗಿಬಂದವನು
ನೀಗಿದ ಹರಣವನುಳಿಸಿ ಕೊಂಡವನು
ಈಗಲೆ ಬಂದವ ನೀನಾರು

ಆರಯ್ಯ ಬಂದವನೆಂದು ಆನಂದದಿ
ನಾರಿಯು ಅಳುತಲಿ ಕೇಳಲು ಮುನಿಯು
ನಾರಿಯ ಕಂಗಳನೊರಸುತಲೆಂದ:
'ನಾರಿಯೆ, ಬಂದೆ ಸಕಾಲದಲಿ'.

—ಹೊಯಿಸಳ

## ಸುನೀತನ ಗೀತ

ಗುರುವಿನ ಮಹಿಮೆಯ ಹೊಗಳುವ ಗೀತಾ
ಇದ ಹಾಡಿದನು ಸುನೀತಾ

ಮಗಧರ ನಗರಿ ರಾಜಗೃಹದಲಿ
ಬೀದಿಯ ಕಸವನು ಗುಡಿಸುವನವನು
ಕೀಳು ಜಾತಿಯಲಿ ಕೀಳು ಜನದಲಿ
ಹುಟ್ಟಿ ಬೆಳೆದುದು ಅವನದು ಹವಣು
ಮೈ ಕೈ ದೂಳು ಉಂಬುದು ಕೂಳು
ಉಡುವುದು ಚಿಂದಿ ಹರಕು ಹಾಳು,
ಬಿಸಿಲು ಬೇಡವೆನೆ ಮರಗಳ ನೆರಳು,
ಮಳೆಗಂಜಿದನೇ ಕಾಡಿನ ಗುಡಿಲು
ರುಚಿಬೇಕೆಂದನೆ ತೋಪಿನ ಮಾವು
ಸೋತು ಮಲಗುವನೆ ಭೂಮಿಯ ಮಡಲು
ಬೀದಿಯ ಕಸವನು ಗುಡಿಸುವನವನು
ಕಷ್ಟದಿ ಬೆಳೆದುದೆ ಅವನದು ಹವಣು.

ಬಹು ಜನ ಹಿರಿಯರು ಬಹು ಜನ ಪೂಜ್ಯರು
ಸಾವಿರ ಜನ ಮಹಸೀಯರವನಿಗೆ
ಶರಣು ಶರಣು ಎಂದುದು ಆ ಗುಡಿಲು
ರಾಜಾಲಯಕೆ ಮಾಡಕೆ ಮನೆಗೆ
ದೂರದೆ ಬಗ್ಗಿ ಅವನಿರೆ ತಗ್ಗಿ
ಮುಂದಕೆ ಹೋಹರು ಹಿರಿಯರು ಹಿಗ್ಗಿ
ಯಾರೂ ಸುಳಿಯದ ತಾಣದೆ ಕುಳ್ಳಿರೆ
ಅದೆ ಅವನಿಗೆ ಮರ್ಯಾದೆಯ ತಾವು

ಸಾಲ್ಮರದಡಿಯನು ಗುಡಿಸುವ ವೇಳೆ
ಅದರಿಂದುದುರಿದ ಹೂವೇ ಹೂವು
ಗುಡಿಲಿನ ದೇಹದಿ ಬಾಳುತ ಜೀವ
ಸವಿದಿತು ದಿನವೂ ದೈನ್ಯದ ನೋವ

ಬೆಲೆ ಬಾಳದ ಬಾಳುವೆಯನು ಇಂತು
ನಡೆಸಿರಲವನು ರಾಜಗೃಹದಲಿ
ಕಸವನು ಗುಡಿಸುತ ಕಸವೇ ಆಗಿ
ಕಸಕೂ ಕಡಿಮೆ ಅಧಮರ ಮೊದಲಿ
ಬಂದಿತು ಕಾಲ ಹರಿಯಿತು ನಾಲ
ಕಂಡನು ಅವನೂ ಬಾಳಿನ ಮೇಲ
ಸಾವಿರ ಶ್ರಮಣರು ಹಿಂಗಡೆ ಬರುತಿರೆ
ಹೊಕ್ಕನು ನಗರಿಯ ರಾಜರ ರಾಜ.
ಬುದ್ಧಗುರುವಿನಾಮುಖದಲಿ ನೋಡು
ಚಂದ್ರನ ಕಾಂತಿ ಸೂರ್ಯನ ತೇಜ
ಬಂದನು ಎಲ್ಲಾ ಜೀವದ ಬಂಧು
ಬಂದನು ಅಪಾರ ಕರುಣಾಸಿಂಧು

ಲಕ್ಷಾಧೀಶರು ಕೋಟಿಯಧೀಶರು
ನಗರಾಧಿಪ ಮಾಂಡಲಿಕರು ಮಲ್ಲರು
ಮಂತ್ರಿ ಮಹಾಮಾತ್ರರು ಸತ್ಪಾತ್ರರು
ಎದುರುಗೊಂಡರು ಉಚಿತದೊಳೆಲ್ಲರು
ಬಾಂಗುಡಿ ತೋರಣ ತೇಜೀವಾರಣ
ಹೆಸರನು ಹೊಗಳುವ ವಂದಿ ಚಾರಣ
ಇರ್ಕಡೆಯಲಿ ಇವರೆಲ್ಲರು ನಿಂದಿರೆ
ಮಧ್ಯದೆ ನಡೆಯುತ ಬಂದರು ತಂದೆ

ಬರವನು ನೋಡುತ ಮನೆಗಳ ಮುಂಗಡೆ
ಹರುಷದಿ ನಿಂತಿತು ನಗರದ ಮಂದಿ
ನಾನೂ ದಾರಿಯ ಬದಿಯಲಿ ನಿಂತೆ
ನೋಡಿದೆ ಗುರುವನು ಹರಿಯಿತು ಚಿಂತೆ

ಮೊಗದಲಿ ತೊಳಗಿದ ಕರುಣೆಯ ನೋಡಿ
ತೋರಿತು ಯಾವುದೊ ಪ್ರೇಮ ಸಲಿಗೆ
ಹೊರಳಿತು ಒಳಗು ಎಂತೋ ಆಯಿತು
ಹಾವಿನ ತೆರದಲಿ ಹರಿದೆನು ಬಳಿಗೆ
ನೆಲದಲಿ ಕೆಡೆದು ಪಾದವ ಹಿಡಿದು
ಅರ್ಥವ ಕಾಣದ ನುಡಿಯನು ನುಡಿದು
ಉದಯದೊಳೆಲ್ಲಿಯೊ ಸಾರಿದ ತಾಯ
ಸಂಜೆಗೆ ನೋಡಿದ ಕಂದನ ರೀತಿ
ಕಣ್ಣೀರುಕ್ಕಿರೆ ನೋಡಿದೆನವರನು
ಇಲ್ಲವಾಯ್ತು ಮಡಿ ಮೈಲಿಗೆ ನೀತಿ
ಹಾ ಎಂದರು ಜನ ಬಿಡಿಸಲು ಬಂದರು
ಗುರುದೇವರು ಬಿಡಿ ಬಿಡಿ ಇರಲೆಂದರು

ಬಿಡಿಸಲು ಬಂದವರನು ತಡೆಯುತ್ತ
ಗುರುದೇವರು ಹಿಡಿದೆತ್ತಿದರೆನ್ನ
ಕಣ್ಣೀರನು ಕಿರುಬೆರಳಿಂದೊರಸಿ
ಕೆಂದಳಿರಂದದ ಕೈಯಲಿ ಬೆನ್ನ
ತಡವಿದರಯ್ಯ ಮೆಯ್ಯಿಗೆ ಮೆಯ್ಯ
ಸೋಕಿಸಿ ನಿಂತರು ಇಲ್ಲ ಅಸಯ್ಯ
ದೇವಾ ನಿಮ್ಮನು ಮುಟ್ಟಿದೆನಲ್ಲಾ
ಎನ್ನುತ ನಾನು ಕಾತರ ನುಡಿಯೆ

ಮೆಲ್ಲನೆ ನಕ್ಕರು.   ಹಣತೆಗೆ ಜಿಡ್ಡೆನೆ
ಜಿಡ್ಡೇ ಎಣ್ಣೆ ದೀಪದ ಕುಡಿಗೆ?
ಪಾವನನಾದೆನು ಅಂದು ಸುನೀತಾ
ಗುರುವರನಡಿಯನು ಸೋಂಕಿ ಪುನೀತಾ

ಜೊತೆಯಲಿ ನಡೆದೆನು ಆ ದಿನವೆಲ್ಲ
ಕಲಿಸಿದರಂದೇ ತತ್ವದ ಪರಿಯ
ಮನಸಿನ ಕಣ್ಣಿನ ಎವೆಯನು ಬಿಡಿಸಿ
ಸೆಳೆದರು ಹಾಹೆಯ ಮರೆಸಿದ ತೆರೆಯ
ಸಲಹಲು ತಂದೆ ಬದುಕಿದೆನಂದೇ
ಇನ್ನೀ ಜೀವಕೆ ಕೊರೆಯೆ ಕುಂದೆ
ಮೂರು ಲೋಕದಲಿ ಬಾಳುವ ಬಾಳೂ
ಅಂದಿನ ಇರುಳಿನ್ನೆದುರಲಿ ಹರಿಯಿತು
ಇಂದ್ರಾಗ್ನಿ ಮರುತ ವರುಣ ನಿಋಋತಿ
ಎಲ್ಲ ದೇವಗಣ ಬಳಿಯಲಿ ನೆರೆಯಿತು
ವಿಶ್ವಜೀವನಾಬ್ಧಿಯ ವೃಕ್ಷದಲಿ
ಅಲೆತೇಲಿದೆನು ಅಥಮರ ಮೊದಲಿ

ಉಳಿದರಿಗೆನಿತೋ ವರುಷದ ಮೇಲೆ
ದೊರೆಯುವ ತಪಸಿನ ಫಲವನು ನನಗೆ
ಗುರು ಒಂದೇ ದಿನದಲಿ ನೀಡಿದರು.
ಮನಸು ಮಾಡಿದರೆ ಕಷ್ಟವೆ ಧಣಿಗೆ
ಗುಡಿಸಿದ ಕಸವು ಸಹಿಸಿದ ಹಸಿವು
ಆಯಿತು ಆತ್ಮದ ಖಡ್ಗಕೆ ಮಸೆವು
ಗುರುವಿನ ಕೃಪೆಯಿಂದೊದವಿದ ತಿಳಿವು
ಬೇಸಗೆ ಹರಿಯುದ ಪ್ರಭೆಯೆನೆ ಬೆಳೆಯೆ

ಹೊರೆಯಾಗಿಹ ಹಾವಿನ ಪರೆಯಂತೆ
ದೀನ ಕೃಪಣತೆಯನೆಲ್ಲವ ಸುಲಿಯೆ
ಲೋಕದ ಜೀವನವೇ ನಾನಾದೆ
ಹರಿಯಿತು ನಾನು ಎನ್ನುವ ಬಾಧೆ.

ಜಯವಾಗಲಿ ಗುರುವರ ಬುದ್ಧನಿಗೆ
ಜಯ ಅರಗುವರಗೆ ಸಿದ್ಧಾರ್ಥನಿಗೆ
ಜಯವಾಗಲಿ ಅಂತ್ಯಜ ಭ್ರಾತೃವಿಗೆ
ವಿಶ್ವಪ್ರೇಮದ ಜೀವನ್ಮಣಿಗೆ
ಜಯಗುರು ದೇವ ದೀನರ ಕಾವ
ಜಯಜಯ ನನ್ನ ಜೀವದ ಜೀವ
ಎಲ್ಲೆಡೆ ಹರಡಲಿ ನಿನ್ನುಪದೇಶ
ಹರಿಯಲಿ ಎಲ್ಲಾ ಮನಸಿನ ಭ್ರಾಂತಿ
ಎಲ್ಲೆಡೆ ಅರಳಲಿ ತಿಳಿವಿನ ಮೊಗ್ಗು
ಎಲ್ಲಾ ಹೃದಯದಿ ತೊಳಗಲಿ ಶಾಂತಿ
ಜಯ ಶಾಕ್ಯಸಿಂಹ ಜಯ ಮೌನಿವರ
ಜಯ ಗುರುದೇವ ಭವಭೀತಿಹರ.

—ಶ್ರೀನಿವಾಸ

# ಉರಿವ ಮನೆ

ಬಲ್ಲಿದನೊಬ್ಬನಿಗೆ ಬಿರುಕುಗೋಡೆಯ, ಬೆಂಡು
ಿಗೆಯ ಮುರುಕು ಮನೆಯೊಂದಿತ್ತು. ಅದಕೊವೆ
ಯವನು ಹೊರಗೋಡಿ, ತನ್ನ ನನ್ನಿಯ ಮಕ್ಕಳ
ಮಕ್ಕಳು ಮನೆಯೊಳಗಾಡುತಿರುವರು. ಏಗೈ
ಾಡಿ 'ಕರೆತರಲು ಹೋದರೆ ಕೇಡನರಿಯದಾಮು
. ಎಲ್ಲರನು ಒಮ್ಮೆ ಹಿಡಿದು ತರಲು ಉಪಾಯ
ಬೆದರುವರು; ಒದರಿದರೋಡುವರು; ಕಾಲ ಕಳೆ
ಯ ಸೇರುವರು' ಎಂದು ಪರಿಪರಿ ಯೋಚಿಸಿ
ದು "ಮಕ್ಕಳೇ! ಬನ್ನಿ, ಬನ್ನಿ. ನಿಮ್ಮಯ್ಯನು
ಪ್ಪಿವ, ಕಣ್ಣು ಸುಖಿಸುವ, ಆನಂದವು ಮೇರೆವರಿವ ಆ
ತಂದಿರುವನು." ಎಂದು ಕೂಗಿದನು. ಕೂಗು
ಉರಿವ ಮನೆಯಿಂದ ಕುಣಿಯುತ್ತ ನಲಿಯುತ್ತ
ಆಟದ ಸಾಮಾನಿನಾಶೆಯಿಂದ ಕೈ ಚಾಚಿ ನಿಂತ
ು. ತಾನಂದಂತೆ ಅಯ್ಯನಾ ನನ್ನಿಮಕ್ಕಳಿಗಾಟ
ತ್ತನು. ನಿಜವರಿತ ಮಕ್ಕಳಾಗ 'ಅಯ್ಯ! ನಿನ್ನ
ಕ್ತಿಮಾರ್ಗವ ತೋರಿತು; ಆ ಯುಕ್ತಿಯು ನಮ್ಮ
' ಎಂದು ಕೊಂಡಾಡಿದರು.

ಭೂಲೋಕದ ಮಕ್ಕಳು ಆಟದ ಸಾಮಾನುಗಳ
ರೆಂದು ಚೆನ್ನಾಗಿ ಬಲ್ಲನಾ ಬುದ್ಧದೇವ.

— **ತಿರುಮಲೆ ತಾತಾಚ**

# ಬಾವಿಯ ಬಳಿಯ ಬಾಲೆ

ಬುದ್ಧನ ಶಿಷ್ಯನಾನಂದನೊಮ್ಮೆ ಕೆಲಸದ ಮೇಲೆ ಹೊರಟನು. ನಡೆನಡೆದು ಹಳ್ಳಿಯೊಂದರ ಹತ್ತಿರಕೆ ಸರಿದನು. ನೀರಡಿಕೆಯಿಂದ ಬಳಲಿ ಬೇಸತ್ತು ಬಾವಿಯ ಬಳಿ ನಿಂತ ಬಾಲೆಯೊಬ್ಬಳ ಕಂಡು "ನಾಲಿಗೆಯೊಣಗುತಿದೆ, ನೀರಿಡೆನಗೆ" ಎಂದನು.

ಆಗಲಾ ಪ್ರಕೃತಿ, ಅದೇ ಅವಳ ಹೆಸರು, 'ಪಾರ್ವ! ಹೊಲೆಯಳು ನಾನು. ನಾನು ನಿನ್ನ ನೀರಡಿಕೆಯನ್ನು ನೀಗಿದರೆ ನಿನ್ನ ಕುಲಕೆ ಬರುವುದು ಕೊರತೆ. ಮನ್ನಿಸಾ' ಎಂದಳು.

ಆನಂದನಾಗ 'ನಾ ಜಲವಲ್ಲದೆ ಕುಲವ ಕೇಳಿದೆನೆ?' ಎಂದನು.

ಆಗಲಾ ಪ್ರಕೃತಿಯ ಮನದಾನಂದವ ಹೇಳಲಾರೆ. ಮರೆತಳು ತನ್ನ ತನುವ; ಕೊಟ್ಟಳಾನಂದಗೆ ಕುಡಿವ ಜಲವ. ನೀರಡಿಕೆಯಳಿದು ಆನಂದನು ದಾರಿಹಿಡಿದನು. ಪ್ರಕೃತಿಯಾನಂದನ ಹಿಂಬಾಲಿಸಿದಳು.

ಶಾಕ್ಯಮುನಿಯ ಶಿಷ್ಯನಿವನಾನಂದನೆಂದರಿತು ಪ್ರಕೃತಿಯು ಬಂದಳಾ ಬುದ್ಧನ ಬಳಿಗೆ. ಬಂದು "ದೇವಾ! ಕಾಯಬೇಕೆನ್ನ; ನಿನ್ನಾನಂದನಿರುವೆಡೆಯೊಳಿರಿಸಬೇಕೆನ್ನ; ನಾನವನ ನೋಡುತಿರಬೇಕು; ನಾನವನೂಳಿಗವ ಮಾಡುತಿರಬೇಕು; ಎನ್ನ ಮನದನ್ನನವನು; ಒಲಿದಿರುವೆನೋ ನಾನವನ' ಎಂದಳು.

ಪ್ರಕೃತಿಯ ಮನವರಿತಾಗ "ನಿನ್ನ ಮನವ ನೀನರಿಯೆ—ನೀನೊಲಿದಿರುವುದಾನಂದನನಲ್ಲವಬಲೆ, ಕೇಳೆನ್ನ ಮಾತ; ನೀನೊಲಿದಿರುವುದಾನಂದನ ನಲ್ಮೆಯನು, ಕಂಡೆಯಾ? ಅವನು ನಿನಗಿಟ್ಟ ನಲ್ಮೆಯನು ಕೊಂಡೊಯ್ದು ನಿನ್ನ ಕೈಲಾದನ್ನ ನೀಡು ನೀನಾ ನಲ್ಮೆಯನು ಜನರಿಂಗೆ. ಅರಸಾಳಿಂಗೆ ದಯೆಗೆಯ್ವುದೌದಾರ್ಯವಹುದು, ನಿಜ. ಕಷ್ಟನಿಷ್ಠುರಗಳ ಸೈರಿಸುವ ಆಳು ತನಗಾದಪಮಾನವನೆಣಿಸದೆ, ದುಃಖವ ನೆನೆಯದೆ, ಎಲ್ಲವ ಮರೆತು ಜನರಿಂಗವನು ತೋರುವ ದಯೆಯ ಮೈಮೆಯನೇನೆನ್ನಲಿ. ಲೋಕವವನ ಬಾಧಿಪುದು. ಆದರೆ ಅವನು ಲೋಕಕೆ ಕೆಡಕನೆಣಿಸನು. ತನ್ನ ಬಂಧನಕೆ ಭಾಗಿಗಳಪ್ಪರ ದ್ವೇಷಿಸನು, ಆದರವರಿಂಗೆ

ಕಣ್ಣೀರಿಡುವನು. ಪ್ರಕೃತಿ! ಉತ್ತಮಕುಲದವರಿಂಗೆ ನೀಚಕುಲದ ನೀನು ಆದರ್ಶಳವ್ವ. ಹೊಲೆಯುಳಾದರೂ ಪಾರ್ವಂಗೆ ಬುದ್ಧಿಗಲಿಸವ್ವ. ಧರ್ಮದ ದಾರಿಯ ಬಿಡದಿರವ್ವ" ಎಂದನಾ ಬುದ್ಧದೇವ.

—**ತಿರುಮಲೆ ತಾತಾಚಾರ್ಯ ಶರ್ಮ**

# ಕುಂದದಾನಂದ

ಅನ್ನಭಾರನು ಸುಮನನ ಗುಲಾಮನು. ಹುಲ್ಲು ಹೊರೆ ಹೊತ್ತು ಕೆಲಸಕನುವಾದನೊಂದು ದಿನವವನು. ಹೊರೆ ತಲೆಗಿಟ್ಟು ಅನ್ನಕೆ ಕೈ ನೀಡಿದ ಶ್ರಮಣನೊಬ್ಬನ ಕಂಡನವನಾಗ. ಕಂಡು, ಕಾಲವ ಕಳೆಯದಲೆ, ಹೊರೆಯ ನೆಲಕೊಗೆದು, ಓಡಿದನು ಮನೆಗರೆನಿಮಿಷದಿ. ತನಗಡಲೆಂದಿಟ್ಟನ್ನವ ತಂದಾನಂದದಿಂದ ಇತ್ತನಾ ಶ್ರಮಣಂಗೆ. ಶ್ರಮಣನಾ ಅನ್ನವ ಕೊಂಡು ಮನದಣಿಯೆ ಉಂಡು, ಅನ್ನಭಾರಂಗೆ 'ಸಿರಿ ಸುಖವೆಂಬುದು ಆಕಾಶದ ರಚನೆ ಕಣಾ! ಇದನುಳಿದು, ಮನದಿಚ್ಛೆಯ ನರಿದು, ಮಾತರಿಯದ, ತನುಸೋಂಕದ, ಮನಮುಟ್ಟದಾನಂದವ ಪೊಂದು' ಎಂದನು. ಮನೆಯೊಳಗಣಿಂದ ಉಪದೇಶವ ಕೇಳಿ ಸುಮನನ ಮಗಳಾನಂದಿಸಿದಳು.

ಸುಮನನ ಕಿವಿಗೆ ಬಿತ್ತೀ ಸವಿಯ ಸುದ್ದಿ. ಆಗಲವನೆದ್ದು, ಅನ್ನಭಾರನಿದ್ದೆಡೆಗೆಡವುತ್ತಲೋಡಿ, ಧನವ ನೀಡಿ "ಶ್ರಮಣನು ನಿನಗಿತ್ತ ಸಂದೇಶವನೆರಡಾಗಿಸಿ ನೀಡೆನಗದರೊಳೊಂದರ್ಧವ" ಎಂದನು. ಆಗಲಾ ಅನ್ನಭಾರನು "ಸೈರಿಸೆನ್ನೊಡೆಯಾ! ಎನ್ನ ಗುರುವೆಂದೊಡಾಗಲಿ" ಎಂದು ಬಂದನಾ ಶ್ರಮಣನಿದ್ದೆಡೆಗೆ. ಬಂದು "ಗುರುದೇವ! ನಾನಿತ್ತ ಭಿಕ್ಷಕೆ ನೀನಾನಂದವನೆನಗಿತ್ತೆ. ಎನ್ನೊಡೆಯನದರೊಳರ್ಧಕೆ ಕೈನೀಡಿ ನಿಂತಿಹನು. ಅದನು ನಾನವನಿಗಿಡಲಹುದೆ?" ಎಂದನು.

ಆಗಲಾ ಶ್ರಮಣನು "ನೂರು ಮನೆಯ ಹಳ್ಳಿಯೊಂದರಲ್ಲಿ ದೀಪವೊಂದುರಿಯುತಿತ್ತು. ನೆರೆಮನೆಯವನು ಬಂದು ತನ್ನ ದೀಪವನದರಲಿ ಹಚ್ಚಿಕೊಂಡೊಯ್ದನು. ಹೀಗೆ ಮನೆಯಿಂದ ಮನೆಗೊಯ್ದರಾ ದೀಪವನು. ಹಳ್ಳಿಯ ಕತ್ತಲೋಡಿತು. ಬೆಳಕು ಬೆಳಗಿತು. ಅಂತೇ ಸತ್ಯದ ಬೆಳಕನು ಕೆಡಿಸದೆ ಹರಡಲಹುದು. ನಿನಗಿತ್ತಾನಂದವನೂ ಅಂತೇ ಭಾಗಿಸಲಪ್ಪುದು. ಅದರಿಂದದು ಕುಂದದು." ಎಂದುಸುರಿದನು.

ಅನ್ನಭಾರನಾಗ ತನ್ನೊಡೆಯನ ಮನೆಗೋಡಿ ಬಂದು "ಜಿಯ್ಯಾ! ಕೈಕೊಳ್ಳೆನ್ನಾನಂದದೊಳರ್ಧವ"ನೆಂದನು. ಸುಮನನದನು ಕೈಕೊಂಡು

ಅನ್ನಭಾರಗೆ ಹಣವ ನೀಡಿದನು. ಆಗಲನ್ನಭಾರನು "ಆಗದು ಆಗದು. ಆನಂದವ ಮಾರಲಹುದೆ? ನಾನಿಡುವದನು ದಾನದಂತರಿದು ಸ್ವೀಕರಿಸಾ" ಎಂದನು. ಸುಮನನಾ ಮಾತಿಗೆ ವೈಮರೆತು "ಅನ್ನಭಾರ! ನೀನಿನ್ನು ಗುಲಾಮನಲ್ಲ, ನನ್ನೊಡಹುಟ್ಟಿದವನು. ನನಗೆ ನಿನ್ನೊಳಗಿರುವ ವಿಶ್ವಾಸ ಕಾಗಿ, ಗೌರವಕಾಗಿ ನೀನೀಹಣವ ಬಹುಮಾನವಾಗಿ ಸ್ವೀಕರಿಸಾ" ಎಂದನು.

—ತಿರುಮಲೆ ತಾತಾಚಾರ್ಯ ಶರ್ಮ

# ಜಗಜ್ಜ್ಯೋತಿ

ಕೌಶಾಂಬಿಯಲಿ ಪಾರ್ವನೊಬ್ಬನಿರುವನು. ಅವನು ಒಳ್ಳೆಯ ವೇದಿ, ಒಳ್ಳೆಯ ವಾದಿ; ಓದಿನೊಳವನ ಸರಿ ಯಾರಿಲ್ಲ; ವಾದದೊಳವನ ನೆದುರಿಸುವರಿಲ್ಲ. ಅವನೊಂದು ಪಂಜನುರಿಸಿ, ತನ್ನ ಕೈಯೊಳದನಿರಿಸಿ ಊರೂರ ತಿರುಗುವನು. ಕಂಡವರಿದರರ್ಥವೇನೆನಲು "ಜಗವೆಲ್ಲ ಕತ್ತಲೆಯ ಕೋಣೆ; ಎನ್ನ ಕೈಲಾದನ್ನ ನಾನದನು ಬೆಳಗಿಸುವೆ"ನೆಂದನು.

ನಡೆಯುತಿರೆ ಮಳಿಗೆಯ ಮುಂದೆ ಕೂತಿದ್ದ ಶ್ರಮಣನೊಬ್ಬನು ಆ ಪಂಜಿನಪಾರ್ವನ ಮಾತ ಕಂಡಚ್ಚರಿಗೊಂಡೆದ್ದು "ಗೆಳೆಯಾ! ಈ ಹಗಲ ಬೆಳಕ, ಈ ತೊಳಪ ಬೆಳಕ ಕಾಣಲು ನಿನಗೆ ಕಣ್ಣಿಲ್ಲದಡೆ ಜಗವೆಲ್ಲ ಕತ್ತಲೆಯೆಂದು ಜರಿವೆಯೇಕೆ? ನಿನ್ನೀ ಪಂಜು ರವಿಯ ತೇಜವನು ಹೆಚ್ಚಿಸಲಾರದು. ಲೋಕಿಗರ ಮನದ ಕತ್ತಲೆಯನೋಡಿಸಲೆಂದು ಒಳ್ಮನದಿ ನೀ ಪಿಡಿದ ಪಂಜು ನಿನ್ನ ನಾಣಿಲಿಗತನವನೇ ನಾರುತಿಹುದೋ ಮರುಳೆ!" ಎಂದನು.

ಆಗಲಾ ವೇದಬಿಜ್ಜಿಗನು 'ಆದೊಡೆ ನೀನುಸಿರ್ದ ಸೂರ್ಯನೆಲ್ಲಿಹನು?' ಎನಲಾಗ ಶ್ರಮಣನು 'ಕೇಳಾ! ಭಗವಾನ್ ಬುದ್ಧನ ಜ್ಞಾನವೇ ಮನಸಿನ ರವಿ ಕಣಾ' ಎಂದುತ್ತರವಿತ್ತನು.

**—ತಿರುಮಲೆ ತಾತಾಚಾರ್ಯ ಶರ್ಮ**

## ಸುನೀತ ಗೀತೆ

ನೀಚ ಕುಲದಲಿ ಜನನ,
ನಾನಲ್ಪಭೋಜನನು, ನಾ ದರಿದ್ರ ;
ಹೂಗಳನು ಗುಡಿಸುವುದು—
ಅದುವೆ ಆಗಿತ್ತೆನ್ನ ಹೀನಕರ್ಮ.

ಹೀನೈಸಿ ಪರಿಭವಿಸಿ
ಜರಿದು ಪೋಗುವರೆನ್ನ ಕಂಡ ಜನರು ;
ಎನ್ನ ಮನ ಕಿರಿದಪ್ಪು-
ದಾನು ಬಹುಜನರಿಂಗೆ ನಮಿಸುತಿದ್ದೆ.

ಅಂದು ಕಂಡೆನು ನಾನು
ಭಿಕ್ಷುಸಂಘವು ಬಳಸಿ ಬೆಂಬಿಡಿದನ—
ಮಗಧೆದ ಪುರೋತ್ತಮವ
ಪುಗುವಾ ಮಹಾವೀರ ಸಂಬುದ್ಧನ.

ಹೆಗಲಿನಡ್ಡೆಯನಾಗ
ಕೆಳಗಿರಿಸಿ ವಂದಿಸಲು ಬಳಿಸಾರಲು
ನನ್ನದೇ ಮೇಲಿನನು-
ಕಂಪನದಿ ನಿಂತನಾ ಪುರುಷೋತ್ತಮ.

ವಂದನೆಗಳನು ಸಲಿಸಿ
ಗುರುಚರಣಗಳಿಗೊಂದು ಬಳಿಗೆ ನಿಂತು
ಸರ್ವಸತ್ತ್ವೋತ್ತಮನ
ಯಾಚಿಸಿದೆನಾನಾಗ ಪ್ರವ್ರಜ್ಯವ.

ಕಾರುಣಿಕನವನದಕೆ
ಸರ್ವಲೋಕಾನುಕಂಪಕನಾದ ಗುರುವು
'ಬಾ ಭಿಕ್ಷು!'ವೆಂದೆನ್ನ
ನುಡಿಸಲಾಯ್ತೆನಗದುವೆ 'ಉಪಸಂಪದಾ'

ಅಪ್ರಮತ್ತನೆ ಆಗಿ
ವಿಹರಿಸುತೆ ವನಗಳೊಳಗೇಕಾಕಿಯಾಗಿ
ಎನಗೆ ಜಿನನುಪದೇಶ-
ಗೈದ ಗುರುವಚನಗಳ ನಡೆದೆನಾನು.

ರಾತ್ರಿಯಾಯಿತು; ಮೊದಲ
ಯಾಮದಲಿ ನೆನಪಾಯ್ತು ಪೂರ್ವಜಾತಿ;
ಮಧ್ಯಮದ ಯಾಮದಲಿ
ಪರಿಶುದ್ಧವಾಯಿತೈ ದಿವ್ಯಚಕ್ಷು;
ಕಡೆಯ ಯಾಮಕೆ ಸಿಡಿದು
ಪುಡಿಯಾಯ್ತು ಕತ್ತಲೆಯ ದೊಡ್ಡ ಮೊತ್ತ.

ಅಂದು ಕತ್ತಲೆ ಕರಗಿ
ಸೂರ್ಯನೇಳುವ ಮೊದಲಿನುದಯಕಾಲದಲಿ
ಇಂದ್ರ ಬ್ರಹ್ಮರು ಬಂದು
ಬೊಗಸೆಗೈಗಳನೆತ್ತಿ ಪೊಡವಟ್ಟರೆನಗೆ:

"ನಮಿಸುವೆವು ನಿನಗಿದೋ
ಪುರುಷ ಆಜಾನೇಯ! ಪುರುಷೋತ್ತಮಾ!
ನಿನ್ನಾಸ್ರವಗಳೆಲ್ಲ
ಕ್ಷೀಣವೈ! ಮಾರಿಷ! ನೀ ದಕ್ಷಿಣಾರ್ಹ!"

ಇಂತು ದೇವರ ಸಂಘ
ಸುತ್ತಿ ಬಳಸಿದ ನನ್ನ ನೋಡಿ ಗುರುವು
ಮುಗುಳುನಗೆಯನು ಮೆರೆದು
ನುಡಿದನಹ! ಅರ್ಥವಿಂತಾಗುವಂತೆ:

"ತಪದಿಂದೆ ದಮೆಯಿಂದೆ
ಬ್ರಹ್ಮಚರ್ಯವು ಮೇಣು ಸಂಯಮಗಳಿಂದೆ—
ಇವುಗಳಿಂದಲೆ ಪ್ರಾಪ್ತಿ
ಬ್ರಾಹ್ಮಣ್ಯ; ಬ್ರಾಹ್ಮಣೋತ್ತಮನಿವನೆ ತಾನೆ!"

—'**ಥೇರಗಾಥಾ**'ದಿಂದ

# ದನ್ತಿಕಾ ಗೀತೆ

ಹಗಲು ವಿಹಾರವ ಮುಗಿಸಿ ಹೊರಟು ನಾ
ಗೃಧ್ರಕೂಟಪರ್ವತದಿಂದೆ
ನದಿಯ ತೀರದಲಿ ಕಂಡೆ ನೀರಿನಲಿ
ಮಿಂದು ಮೇಲೆ ಬರುವಾನೆಯನು.

ಪುರುಷನಂಕುಶವ ತೆಗೆದುಕೊಂಡು 'ಕೊಡು-
ಪಾದ'ವೆಂದು ತಾ ಕೇಳಿದನು;
ತನ್ನ ಪಾದವನ್ನಾನೆ ಪಸರಿಸಿತು,
ಪುರುಷನಾನೆಯದನೇರಿದನು.

ದಮನವಾಗದುದು ದಮನವಾದುದನು
ಮಾನವನಿಗೆ ವಶವಾದುದನು
ಕಂಡು ವನಕೆ ನಡೆದಾಗ ಚಿತ್ತವನು
ತಂದು ಸಮಾಧಿಗೆ ನಿಲಿಸಿದೆನು.

—'ಥೇರೀಗಾಥಾ'ದಿಂದ

## ಪಟಾಚಾರಾ ಗೀತೆ

ನೇಗಿಲಿನ ಬಲದಿಂದ ಹೊಲಗದ್ದೆಗಳನುತ್ತು
ಭೂಮಿಯಲಿ ಬೀಜ ಬಿತ್ತಿ,
ಆರ್ಜಿಸಿದ ಧನವನನುಭವಿಸುವರು; ಮಾನವರು
ಸತಿಸುತರ ಪೋಷಿಸುವರು.

ನಾ ಶೀಲಸಂಪನ್ನೆ, ಗುರುಶಾಸನವ ನಡೆಸಿ
ಸೋಮಾರಿಯಲ್ಲದವಳು,
ಔದ್ಧತ್ಯವಿಲ್ಲದವಳಾನೇಕೆ ಬಳಿಸಾರಿ
ನೇರೆನ್ನೈ ನಿರ್ವಾಣವ!

ಕಾಲು ತೊಳೆಯುತ ಜಲದಿ ನಾ ತೊಳೆದ ನೀರಾಗ
ಮೇಲಿಂದ ಹಳ್ಳಕ್ಕೆ ಬಹುದ ಕಂಡು
ನಾ ಸಮಾಧಿಯೊಳಾಗ ಚಿತ್ತವನು ನಿಲಿಸಿದೆನು
ಭದ್ರಾಶ್ವವನು ಹಿಡಿದು ಕಲಿಸುವಂತೆ

ನಾ ವಿಹಾರವನಾಗ ನಡೆದೆನೊಳಹೊಕ್ಕು
ಕೈಲೊಂದು ದೀಪ ಕೊಂಡು;
ಮೇಲಾವುದದನು ಮೇಣ್ ಅವಲೋಕಿಸುತ್ತೆ
ಮಂಚಕದ ಮೇಲೆ ಕುಳಿತೆ.

ಆಗ ಸೂಜಿಯ ಹಿಡಿದು
ಬತ್ತಿಯನು ಕೆಳಗೆಳೆದೆನು!
ಬೆಳಕಿನದೆ ನಿರ್ವಾಣ!
ಮನಸು ಮೋಕ್ಷವ ಪಡೆಯಿತು!

—'**ಥೇರೀಗಾಥಾ**'ದಿಂದ

# ಬುದ್ಧನ ಸೇವೆ

ಆ ಸಮಯದಲ್ಲಿ ಒಬ್ಬ ಭಿಕ್ಷುವಿಗೆ ಹೊಟ್ಟೆಯಲ್ಲಿ ಏನೋ ವ್ಯತ್ಯಾಸ ವಾಗಿ ಕಾಯಿಲೆಯಾಗಿತ್ತು. ಅವನು ತನ್ನ ಮಲಮೂತ್ರಗಳಲ್ಲಿ ಬಿದ್ದು ಕೊಂಡಿದ್ದ. ಆ ಸಮಯದಲ್ಲಿ ಭಗವಂತನು ಭಿಕ್ಷುಗಳು ಮಲಗುವ ಸ್ಥಳ ಗಳಲ್ಲಿ ಸಂಚಾರಮಾಡುತ್ತ ಆ ಭಿಕ್ಷುವಿನ ವಿಹಾರದ ಬಳಿಸಾರಿದನು. ಭಗವಂತನ ಹಿಂದೆ ಆಯುಷ್ಮಂತನಾದ ಆನಂದನು ಬರುತ್ತಿದ್ದನು.

ಭಗವಂತನು ಅಲ್ಲಿಗೆ ಬಂದು, ಆ ಭಿಕ್ಷುವು ತನ್ನ ಮಲಮೂತ್ರ ಗಳಲ್ಲಿ ಬಿದ್ದು ಮಲಗಿರುವುದನ್ನು ಕಂಡು, ಅವನ ಬಳಿ ಹೋಗಿ, " ನಿನ ಗೇನು ಕಾಯಿಲೆ, ಭಿಕ್ಷು ? " ಎಂದನು.

" ನನಗೆ ಕುಕ್ಷಿವಿಕಾರ, ಭನ್ತೇ."

" ನಿನ್ನ ಸೇವೆಗೆ ಒಬ್ಬನಿರುವನೆ, ಭಿಕ್ಷು ? "

" ಇಲ್ಲ, ಭಗವನ್."

" ಭಿಕ್ಷುಗಳು ಏಕೆ ನಿನ್ನನ್ನು ಸೇವಿಸುವುದಿಲ್ಲ ? "

" ನಾನು ಭಿಕ್ಷುಗಳಿಗೆ ಏನೂ ಮಾಡುತ್ತಿಲ್ಲ, ಭನ್ತೇ. ಆದುದರಿಂದ ಭಿಕ್ಷುಗಳು ನನ್ನನ್ನು ಸೇವಿಸುವುದಿಲ್ಲ."

ಆಗ ಭಗವಂತನು " ಹೋಗು, ಆನಂದ. ನೀರು ತಾ. ಈ ಭಿಕ್ಷು ವಿಗೆ ಸ್ನಾನಮಾಡಿಸೋಣ " ಎಂದು ಆಯುಷ್ಮಂತನಾದ ಆನಂದನಿಗೆ ಹೇಳಿದನು.

ಹಾಗೆಯೇ ಆಗಲೆಂದು ಆಯುಷ್ಮಂತ ಆನಂದನು ಭಗವಂತನ ಮಾತಿನಂತೆ ನೀರು ತಂದನು. ಆ ನೀರನ್ನು ಭಗವಂತನು ಚಿಮುಕಿಸಿ ದನು. ಆನಂದನು ಮೈ ತೊಳೆದನು. ಭಗವಂತನು ತಲೆಯ ಕಡೆಯೂ ಆನಂದನು ಕಾಲಕಡೆಯೂ ಹಿಡಿದು ಮೇಲೆತ್ತಿ ಮಂಚದಲ್ಲಿ ಮಲಗಿಸಿದರು.

ಆಗ ಭಗವಂತನು, ಅದೇ ಕಾರಣವಾಗಿ, ಆ ಸಮಯದಲ್ಲಿ ಭಿಕ್ಷು ಸಂಘವನ್ನು ಬಳಿಗೆ ಕರೆದು, " ಭಿಕ್ಷುಗಳೆ ! ಇಂತಹ ವಿಹಾರದಲ್ಲಿ ರೋಗಿ ಯಾದ ಭಿಕ್ಷುವಿರುವನೆ ? " ಎಂದು ಕೇಳಿದನು.

“ ಇರುವನು, ಭಗವನ್.”

“ ಆ ಭಿಕ್ಷುವಿಗೆ ಏನು ಕಾಯಿಲೆ, ಭಿಕ್ಷುಗಳೆ? ”

“ ಭನ್ತೇ, ಆ ಆಯುಷ್ಮಂತನಿಗೆ ಕುಕ್ಷಿವಿಕಾರದ ಕಾಯಿಲೆ.”

“ ಭಿಕ್ಷುಗಳೆ, ಅವನ ಸೇವೆಗೆ ಯಾರಾದರೂ ಇರುವರೆ? ”

“ ಇಲ್ಲ, ಭಗವನ್.”

“ ಭಿಕ್ಷುಗಳೇಕೆ ಅವನ ಸೇವೆ ಮಾಡುವುದಿಲ್ಲ? ”

“ ಭಿಕ್ಷುಗಳಿಗೆ ಆ ಭಿಕ್ಷು ಏನೂ ಮಾಡುತ್ತಿಲ್ಲ. ಆದರಿಂದ ಭಿಕ್ಷುಗಳು ಅವನ ಸೇವೆಮಾಡುವುದಿಲ್ಲ.”

“ ಭಿಕ್ಷುಗಳೆ! ನಿಮ್ಮನ್ನು ಸೇವಿಸಲು ನಿಮ್ಮ ತಾಯಿಯಿಲ್ಲ, ತಂದೆಯಿಲ್ಲ. ನೀವು ಒಬ್ಬರನ್ನೊಬ್ಬರು ಸೇವಿಸದಿದ್ದರೆ, .ಇನ್ನು ಯಾರು ನಿಮ್ಮನ್ನು ಸೇವಿಸುವರು? ಭಿಕ್ಷುಗಳೆ, ನನ್ನ ಸೇವೆಮಾಡಬೇಕೆನ್ನುವವರು ರೋಗಿಗಳ ಸೇವೆಮಾಡಲಿ.”

—‘**ವಿನಯಪಿಟಕ**’ದಿಂದ

# ಆರು ದಿಕ್ಕಿನ ಆರಾಧನೆ

ಒಂದು ಸಲ, ಭಗವಂತನು ರಾಜಗೃಹದಲ್ಲಿ, ವೇಣುವನದ ಕಳಂದಕ ನಿವಾಪದಲ್ಲಿ ತಂಗಿದ್ದನು. ಆ ಸಮಯದಲ್ಲಿ, ಒಬ್ಬ ಗೃಹಪತಿಯ ಮಗನಾದ ಸೃಗಾಲಕನೆಂಬವನು ಸಕಾಲದಲ್ಲಿ ಎದ್ದು, ರಾಜಗೃಹದಿಂದ ಹೊರಟು, ಒದ್ದೆಯಾದ ಬಟ್ಟೆ ಕೂದಲುಗಳೊಡನೆ ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ, ಕೆಳಗು, ಮೇಲಿನ ದಿಗ್ಭಾಗಗಳಿಗೆ ಕೈಮುಗಿದು ನಮಸ್ಕರಿಸಿದನು.

ಆಗ, ಭಗವಂತನು, ಪೂರ್ವಾಹ್ನ ಸಮಯದಲ್ಲಿ ಉಡುಪು ಹಾಕಿಕೊಂಡು, ಪಾತ್ರೆ ಚೀವರಗಳನ್ನು ತೆಗೆದುಕೊಂಡು, ಭಿಕ್ಷೆಗಾಗಿ ರಾಜಗೃಹವನ್ನು ಪ್ರವೇಶಿಸಿದನು. ಅಲ್ಲಿ, ಗೃಹಪತಿಪುತ್ರನಾದ ಸೃಗಾಲಕನು ಒದ್ದೆಯಾದ ಬಟ್ಟೆ ಕೂದಲುಗಳೊಡನೆ ಆರು ದಿಗ್ಭಾಗಗಳಿಗೆ ಕೈಮುಗಿದು ನಮಸ್ಕರಿಸುವುದನ್ನು ಕಂಡನು.

ಕಂಡು, "ಇದೇಕೆ, ಗೃಹಪತಿಪುತ್ರ? ಸಕಾಲದಲ್ಲಿ ಎದ್ದು, ರಾಜಗೃಹದಿಂದ ಹೊರಟು, ಒದ್ದೆಯಾದ ಬಟ್ಟೆ ಕೂದಲುಗಳೊಡನೆ ಹೀಗೆ ವಿವಿಧ ದಿಗ್ಭಾಗಗಳಿಗೆ ಕೈಮುಗಿದು ನಮಸ್ಕರಿಸುತ್ತಿರುವೆ?" ಎಂದು ಭಗವಂತನು ಕೇಳಿದನು.

"ಭನ್ತೇ! ನನ್ನ ತಂದೆ ಸಾಯುವಾಗ 'ದಿಕ್ಕುಗಳಿಗೆ ನಮಸ್ಕರಿಸು, ಕಂದ!' ಎಂದು ಹೇಳಿದನು. ಆದರಿಂದ ನಾನು ತಂದೆಯ ಮಾತನ್ನು ಸತ್ಕರಿಸಿ, ಗೌರವಿಸಿ, ಮಾನಿಸಿ, ಪೂಜಿಸಿ, ಸಕಾಲದಲ್ಲಿಯೇ ಎದ್ದು ಈ ರೀತಿ ದಿಕ್ಕುಗಳಿಗೆ ನಮಸ್ಕರಿಸುತ್ತಿರುವೆನು."

"ಗೃಹಪತಿಪುತ್ರ! ಆರ್ಯರ ವಿನಯದಲ್ಲಿ ಆರು ದಿಕ್ಕುಗಳಿಗೆ ನಮಸ್ಕರಿಸತಕ್ಕುದು ಹೀಗಲ್ಲ."

"ಆರ್ಯರ ವಿನಯದಲ್ಲಿ, ಆರು ದಿಕ್ಕುಗಳಿಗೆ ನಮಸ್ಕರಿಸತಕ್ಕುದು ಹೇಗೆ, ಭನ್ತೇ? ಆರು ದಿಕ್ಕುಗಳಿಗೆ ಹೇಗೆ ನಮಸ್ಕರಿಸತಕ್ಕುದೆಂಬ ಆರ್ಯರ ರೀತಿಯನ್ನು ಭಗವಂತನು ತಿಳಿಸಿದರೆ ಒಳ್ಳೆಯದು."

"ಹಾಗಾದರೆ, ಗೃಹಪತಿಪುತ್ರ, ಕೇಳು. ಒಳ್ಳೆಯದಕ್ಕೆ ಮನಸ್ಸು ಕೊಡು. ಹೇಳುತ್ತೇನೆ."

ಗೃಹಪತಿಪುತ್ರನಾದ ಸೃಗಾಲಕನು ಹಾಗೆಯೇ ಆಗಲೆಂದು ಭಗವಂತನ ಮಾತಿಗೆ ಒಪ್ಪಿದನು. ಭಗವಂತನು ಹೇಳಿದನು:

" ಗೃಹಪತಿಪುತ್ರ! ಆರ್ಯರ ಶ್ರಾವಕನು ಆರು ದಿಕ್ಕುಗಳನ್ನು ಆವರಿಸುವುದು ಹೇಗೆ? ಗೃಹಪತಿಪುತ್ರ, ಇವುಗಳನ್ನು ಆರು ದಿಕ್ಕುಗಳೆಂದು ತಿಳಿಯತಕ್ಕುದು :—ತಾಯಿತಂದೆಯರು ಪೂರ್ವದಿಕ್ಕು; ಆಚಾರ್ಯರು ದಕ್ಷಿಣದಿಕ್ಕು; ಹೆಂಡತಿಮಕ್ಕಳು ಪಶ್ಚಿಮದಿಕ್ಕು; ಸ್ನೇಹಿತರೂ ಜೊತೆಗಾರರೂ ಉತ್ತರದಿಕ್ಕು; ದಾಸರೂ ಕೆಲಸಗಾರರೂ ಕೆಳದಿಕ್ಕು; ಶ್ರಮಣರೂ ಬ್ರಾಹ್ಮಣರೂ ಮೇಲುದಿಕ್ಕು.

" ಗೃಹಪತಿಪುತ್ರ! ಹಿಂದೆ ಇವರು ನನ್ನನ್ನು ಪೋಷಿಸಿದರು, ಇಂದು ನಾನು ಇವರನ್ನು ಪೋಷಿಸುತ್ತೇನೆ; ಇವರು ಮಾಡಬೇಕಾದ ಕೆಲಸಗಳನ್ನು ನಾನು ಮಾಡುತ್ತೇನೆ; ನನ್ನ ಕುಲವಂಶಗಳನ್ನು ಮುಂದುವರಿಸುತ್ತೇನೆ; ಆಸ್ತಿಯನ್ನು ನಡೆಸುತ್ತೇನೆ; ಮತ್ತು ಕಾಲಕಾಲಕ್ಕೆ ಪಿತೃಗಳಿಗೆ ದಕ್ಷಿಣೆಯನ್ನು ಒದಗಿಸುತ್ತೇನೆ;—ಎಂದು ಈ ಐದು ರೀತಿಗಳಿಂದ, ತಾಯಿ ತಂದೆಯರು ಪೂರ್ವದಿಕ್ಕೆಂದು ಮಗನು ಅವರ ಸೇವೆಮಾಡತಕ್ಕುದು.

" ಹೀಗೆ ಮಗನಿಂದ ಪೂರ್ವದಿಕ್ಕೆಂದು ಸೇವಿಸಲ್ಪಟ್ಟ ತಾಯಿತಂದೆಯರು ಐದು ರೀತಿಗಳಲ್ಲಿ ಅವನ ಮೇಲೆ ಅನುಕಂಪವನ್ನು ತೋರಿಸುವರು:–ಅವನನ್ನು ಪಾಪದಿಂದ ತಡೆಯುವರು; ಕಲ್ಯಾಣವನ್ನು ಬೋಧಿಸುವರು; ವಿದ್ಯೆಯಲ್ಲಿ ಶಿಕ್ಷೆ ಕೊಡಿಸುವರು; ಅನುರೂಪಳಾದ ಹೆಂಡತಿಯೊಡನೆ ಮದುವೆಮಾಡುವರು; ಸಕಾಲದಲ್ಲಿ ಕುಲದ ಆಸ್ತಿಯನ್ನು ಅವನಿಗೆ ಕೊಡುವರು.

" ಹೀಗೆ, ಅವನು ಪೂರ್ವದಿಕ್ಕನ್ನು ಆವರಿಸುವನು. ಆ ಕಡೆಯಿಂದ ಅವನಿಗೆ ಕ್ಷೇಮ; ಭಯವಿಲ್ಲ.

" ಗೃಹಪತಿಪುತ್ರ! ಏಳುವುದರಿಂದ; ಉಪಚರಿಸುವುದರಿಂದ; ಶುಶ್ರೂಷೆಯಿಂದ; ಪಾರಿಚರ್ಯೆಯಿಂದ; ವಿದ್ಯೆ ಕಲಿಯುವಾಗ ಸತ್ಕರಿಸು

ವುದರಿಂದ;—ಈ ಐದು ರೀತಿಗಳಿಂದ, ಆಚಾರ್ಯರು ದಕ್ಷಿಣದಿಕ್ಕೆಂದು ಶಿಷ್ಯನು ಅವರ ಸೇವೆಮಾಡತಕ್ಕದು.

"ಹೀಗೆ, ಶಿಷ್ಯನಿಂದ ದಕ್ಷಿಣದಿಕ್ಕೆಂದು ಸೇವಿಸಲ್ಪಟ್ಟ ಆಚಾರ್ಯರು ಐದು ರೀತಿಗಳಲ್ಲಿ ಅವನ ಮೇಲೆ ಅನುಕಂಪವನ್ನು ತೋರಿಸುವರು:— ಅವನು ಚೆನ್ನಾಗಿ ಕಲಿತುದನ್ನು ಕಲಿಸುವರು; ಅವನು ಚೆನ್ನಾಗಿ ಗ್ರಹಿಸಿದುದನ್ನು ಹಿಡಿಯಿಸುವರು; ಎಲ್ಲಾ ವಿದ್ಯೆಯ ವಿಷಯವನ್ನೂ ಅವನಿಗೆ ಚೆನ್ನಾಗಿ ತಿಳಿಸುವರು; ಸ್ನೇಹಿತರು, ಜೊತೆಗಾರರೊಡನೆ ಅವನನ್ನು ಕೀರ್ತಿಸುವರು; ಎಲ್ಲಕಡೆಗಳಿಂದಲೂ ಅವನನ್ನು ಕಾಪಾಡುವರು.

"ಹೀಗೆ, ಅವನು ದಕ್ಷಿಣದಿಕ್ಕನ್ನು ಆವರಿಸುವನು. ಆ ಕಡೆಯಿಂದ ಅವನಿಗೆ ಕ್ಷೇಮ; ಭಯವಿಲ್ಲ.

"ಗೃಹಪತಿಪುತ್ರ! ಸನ್ಮಾನಿಸುವುದು; ತಿರಸ್ಕರಿಸದಿರುವುದು; ಪತ್ನೀವ್ರತಸ್ಥನಾಗಿರುವುದು; ಮನೆಯ ಒಡೆತನವನ್ನು ಒಪ್ಪಿಸುವುದು; ಅಲಂಕಾರಗಳನ್ನು ಒದಗಿಸುವುದು;—ಈ ಐದು ರೀತಿಗಳಿಂದ, ಹೆಂಡತಿಯು ಪಶ್ಚಿಮದಿಕ್ಕೆಂದು ಗಂಡನು ಅವಳ ಸೇವೆಮಾಡತಕ್ಕದು.

"ಹೀಗೆ, ಗಂಡನಿಂದ ಪಶ್ಚಿಮದಿಕ್ಕೆಂದು ಸೇವಿಸಲ್ಪಟ್ಟ ಹೆಂಡತಿಯು ಐದು ರೀತಿಗಳಲ್ಲಿ ಅವನ ಮೇಲೆ ಅನುಕಂಪವನ್ನು ತೋರಿಸುವಳು:— ತನ್ನ ಕೆಲಸಗಳನ್ನು ಚೆನ್ನಾಗಿ ವಿಹಿತವಾಗಿ ಮಾಡುವಳು; ಪರಿಜನರನ್ನು ಚೆನ್ನಾಗಿ ಆದರಿಸುವಳು; ಪತಿವ್ರತೆಯಾಗಿರುವಳು; ಅವನು ತಂದ ವಸ್ತುಗಳನ್ನು ನೋಡಿ ಕಾಪಾಡುವಳು; ಸರ್ವಕಾರ್ಯಗಳಲ್ಲಿಯೂ ದಕ್ಷಳಾಗಿ ಅಲಸಿಕೆಯಿಲ್ಲದೆ ಇರುವಳು.

"ಹೀಗೆ, ಅವನು ಪಶ್ಚಿಮದಿಕ್ಕನ್ನು ಆವರಿಸುವನು. ಆ ಕಡೆಯಿಂದ ಅವನಿಗೆ ಕ್ಷೇಮ, ಭಯವಿಲ್ಲ.

"ಗೃಹಪತಿಪುತ್ರ! ದಾನದಿಂದ; ಪ್ರಿಯವಾದ ಮಾತುಗಳಿಂದ; ಮೇಲಾಗುವ ನಡತೆಯಿಂದ; ಅವರನ್ನೂ ತನ್ನಂತೆಯೇ ಕಾಣುವುದರಿಂದ; ಆಡಿದ ಮಾತಿಗೆ ತಪ್ಪದಿರುವುದರಿಂದ;—ಈ ಐದು ರೀತಿಗಳಿಂದ,

ಮಿತ್ರರೂ ಜೊತೆಗಾರರೂ ಉತ್ತರದಿಕ್ಕೆಂದು ಕುಲಪುತ್ರನು ಅವರ ಸೇವೆ ಮಾಡತಕ್ಕದು.

"ಹೀಗೆ, ಕುಲಪುತ್ರನಿಂದ ಉತ್ತರದಿಕ್ಕೆಂದು ಸೇವಿಸಲ್ಪಟ್ಟ ಮಿತ್ರರೂ ಜೊತೆಗಾರರೂ ಐದು ರೀತಿಗಳಲ್ಲಿ ಅವನ ಮೇಲೆ ಅನುಕಂಪ ವನ್ನು ತೋರಿಸುವರು:—ಪ್ರಮತ್ತನಾದಾಗ ಅವನನ್ನು ರಕ್ಷಿಸುವರು; ಪ್ರಮತ್ತನಾದಾಗ ಅವನ ಸ್ವತ್ತನ್ನು ರಕ್ಷಿಸುವರು; ಭೀತನಾದರೆ, ಅವನಿಗೆ ಆಶ್ರಯಕೊಡುವರು; ಅವನಿಗೆ ಆಪತ್ತು ಬಂದಾಗ ಅವನನ್ನು ಬಿಟ್ಟು ಹೋಗುವುದಿಲ್ಲ; ಅವನ ಮನೆಯವರನ್ನು ಗೌರವಿಸುವರು.

"ಹೀಗೆ, ಅವನು ಉತ್ತರದಿಕ್ಕನ್ನು ಆವರಿಸುವನು. ಆ ಕಡೆಯಿಂದ ಅವನಿಗೆ ಕ್ಷೇಮ, ಭಯವಿಲ್ಲ.

"ಗೃಹಪತಿಪುತ್ರ! ಅವರವರ ಬಲಕ್ಕೆ ತಕ್ಕ ಕೆಲಸ ಕೊಡುವುದ ರಿಂದ; ಊಟ ಕೂಲಿಗಳನ್ನು ಕೊಡುವುದರಿಂದ; ಅವರಿಗೆ ರೋಗ ಬಂದಾಗ ಉಪಚರಿಸುವುದರಿಂದ; ತಾನು ತಿನ್ನುವ ಅಪರೂಪವಾದ ರಸ ಗಳನ್ನು ಅವರಿಗೂ ಹಂಚಿಕೊಡುವುದರಿಂದ; ಅವರಿಗೆ ಆಗಾಗ್ಗೆ ವಿರಾಮ ಬಿಟ್ಟುಕೊಡುವುದರಿಂದ;—ಈ ಐದು ರೀತಿಗಳಿಂದ, ದಾಸರೂ ಕೆಲಸ ಗಾರರೂ ಕೆಳದಿಕ್ಕೆಂದು ಆರ್ಯಕನು (=ಸ್ವಾಮಿ) ಅವರ ಸೇವೆಮಾಡ ತಕ್ಕದು.

"ಹೀಗೆ, ಆರ್ಯಕನಿಂದ ಕೆಳದಿಕ್ಕೆಂದು ಸೇವಿಸಲ್ಪಟ್ಟ ದಾಸರೂ ಕೆಲಸಗಾರರೂ ಐದು ರೀತಿಗಳಲ್ಲಿ ಅವನ ಮೇಲೆ ಅನುಕಂಪವನ್ನು ತೋರಿಸುವರು:—ಅವನಿಗಿಂತ ಮೊದಲು ಏಳುವರು; ಅವನು ಮಲಗಿದ ಮೇಲೆ ಮಲಗುವರು; ಅವನು ಕೊಟ್ಟುದನ್ನು ತೆಗೆದುಕೊಳ್ಳುವರು; ತಮ್ಮ ಕೆಲಸಗಳನ್ನು ಚೆನ್ನಾಗಿ ಮಾಡುವರು; ಅವನ ಕೀರ್ತಿ ಹೆಸರುಗಳನ್ನು ತಾವು ಹೋದ ಕಡೆಗೆಲ್ಲ ಕೊಂಡುಹೋಗುವರು.

"ಹೀಗೆ, ಅವನು ಕೆಳದಿಕ್ಕನ್ನು ಆವರಿಸುವನು. ಆ ಕಡೆಯಿಂದ ಅವನಿಗೆ ಕ್ಷೇಮ, ಭಯವಿಲ್ಲ.

“ಗೃಹಪತಿಪುತ್ರ! ಮೈತ್ರಿಯಿಂದ ಕೆಲಸ ಮಾಡುವುದು; ಮೈತ್ರಿಯಿಂದ ಮಾತನಾಡುವುದು; ಮೈತ್ರಿಯಿಂದ ಮನಸ್ಸುಮಾಡುವುದು, ಮನೆಯ ಬಾಗಿಲು ತೆರೆದಿರುವುದು; ಆಹಾರಾದಿಗಳನ್ನು ಒದಗಿಸುವುದು;—ಈ ಐದು ರೀತಿಗಳಿಂದ, ಶ್ರಮಣರೂ ಬ್ರಾಹ್ಮಣರೂ ಮೇಲುದಿಕ್ಕೆಂದು ಕುಲಪುತ್ರನು ಅವರ ಸೇವೆಮಾಡತಕ್ಕದು.

“ಹೀಗೆ, ಕುಲಪುತ್ರನಿಂದ ಮೇಲುದಿಕ್ಕೆಂದು ಸೇವಿಸಲ್ಪಟ್ಟ ಶ್ರಮಣರೂ ಬ್ರಾಹ್ಮಣರೂ ಆರು ರೀತಿಗಳಲ್ಲಿ ಅವನ ಮೇಲೆ ಅನುಕಂಪವನ್ನು ತೋರಿಸುವರು:—ಅವನನ್ನು ಪಾಪದಿಂದ ತಡೆಯುವರು; ಕಲ್ಯಾಣದಲ್ಲಿ ನಿಲ್ಲಿಸುವರು; ಕಲ್ಯಾಣವಾದ ಮನಸ್ಸಿನಿಂದ ಅವನಲ್ಲಿ ಅನುಕಂಪ ತೋರುವರು; ಅವನು ಹಿಂದೆ ಎಂದೂ ಕೇಳದುದನ್ನು ಕೇಳಿಸುವರು; ಅವನು ಕೇಳಿರುವುದನ್ನು ಪರಿಶುದ್ಧಿಗೊಳಿಸುವರು; ಸ್ವರ್ಗದ ಮಾರ್ಗವನ್ನು ತಿಳಿಯಪಡಿಸುವರು.

“ಹೀಗೆ, ಅವನು ಮೇಲುದಿಕ್ಕನ್ನು ಆವರಿಸುವನು. ಆ ಕಡೆಯಿಂದ ಅವನಿಗೆ ಕ್ಷೇಮ, ಭಯವಿಲ್ಲ.”

ಭಗವಂತನು ಹೀಗೆಂದನು. ಹೀಗೆನ್ನಲು, ಗೃಹಪತಿಪುತ್ರನಾದ ಸೃಗಾಲಕನು ಭಗವಂತನನ್ನು ಕುರಿತು “ಬಲುಸೊಗಸು, ಭನ್ತೇ! ಬಲುಸೊಗಸು, ಭನ್ತೇ! ಬಿದ್ದಿದ್ದುದನ್ನು ಎತ್ತಿ ನಿಲ್ಲಿಸಿದಂತೆ, ಮುಚ್ಚಿದ್ದುದನ್ನು ಬಿಚ್ಚಿದಂತೆ, ಮೂಢನಿಗೆ ಮಾರ್ಗ ತೋರಿಕೊಟ್ಟಂತೆ, ಕಣ್ಣಿರುವವರು ರೂಪಗಳನ್ನು ಕಾಣಲೆಂದು ಕತ್ತಲೆಯಲ್ಲಿ ತೈಲದ ದೀಪ ಹಿಡಿದಂತೆ ಭಗವಂತನು ಅನೇಕ ಪರ್ಯಾಯಗಳಿಂದ ಧರ್ಮವನ್ನು ಪ್ರಕಾಶಗೊಳಿಸಿದನು. ನಾನು ಇಂದು ಭಗವಂತನಿಗೂ ಧರ್ಮಕ್ಕೂ ಭಿಕ್ಷುಸಂಘಕ್ಕೂ ಶರಣಾಗುವೆನು! ಇಂದಿನಿಂದ ಪ್ರಾಣವಿರುವವರೆಗೂ ಶರಣಾಗತನಾದ ಉಪಾಸಕನೆಂದು ಭಗವಂತನು ನನ್ನನ್ನು ಸ್ವೀಕರಿಸಬೇಕು” ಎಂದನು.

—‘**ದೀಘನಿಕಾಯ**’ದಿಂದ

## ತಥಾಗತ

ಜಗದ ಜೀವಿಗಳೆಲ್ಲ ಮೋಕ್ಷವಂ ಪಡೆವನಕ
ಮೋಕ್ಷಸಾಮ್ರಾಜ್ಯದಾನಂದವಂ ಒಲ್ಲದೆಯೆ
ಬಾಗಿಲೊಳು ನಿಂದಿರುವ ನಿಸ್ವಾರ್ಥ ಮೂರುತಿಯೆ
ನೀನು ಮಾಯಾವಾದಿ ವೇದಬಾಹಿರನಂತೆ!

ಜನರ ಕಷ್ಟವ ನೋಡಿ ಎದೆಕರಗಿ ಕನಿಕರಿಸಿ
ಎತ್ತುಗೈಯನು ನೀಡಿ ಪಾಪಿಗಳ ಪೊರೆದವನು
ಮಕ್ಕಳಿಗೆ ಉಣಬಡಿಸಿ ಬಳಿಕುಣ್ಣಬೇಕೆಂಬ
ಜಗದ ತಂದೆಯು ನೀನು ವೇದಬಾಹಿರನಂತೆ!

ಸರಸತಿಯ ಗೋಣ್ಮುರಿದು ವಾಕ್ಯಾರ್ಥಗಳ ಮಾಡಿ
ತಪ್ತಮುದ್ರಾಂಕಿತದಿ ಮೈಗಳಂ ಸುಟ್ಟವರು
ಹಸಿದವರ ಹೊರನೂಂಕಿ ತಾವುಂಡು ಹೋದವರು
ಲೋಕದುದ್ಧಾರಕರು ಆ ವೇದದೊಳಗಂತೆ!

ಹೋಮಧೂಮದೊಳಂದು ಕುರುಡಾದ ಕಣ್ಣುಗಳು
ಯಜ್ಞಪಶು ರಕ್ತದಲಿ ನಾದಿದಾ ಹೃದಯಗಳು
ನೇಣು ಹುಲ್ಲೊಳು ಬೆಳೆದ ಜಡಭರಿತ ಜೀವಿಗಳು
ನಿನ್ನ ಹೊರಗಟ್ಟದೇನೆಲೆ ದೇವ ತಥಾಗತ?

ನೀನಿಂತು ಹೊರಗಿರಲು ವೇದಶಾಸ್ತ್ರಗಳೆಲ್ಲ
ಹುಡುಹುಡುಕಿ ಕಾಣದೆಯೆ ದುಃಖದಿಂ ಬಾಯ್ಬಿಡವೆ!
ಹೇಳು ಹೇಳೆಲೆ ತಂದೆ, ನೀನಿಲ್ಲದೆಡೆಯಲ್ಲಿ
ಬಳಿಕ ಹುರುಳೇನುಂಟು ಕಾರುಣ್ಯಮೂರುತಿಯೆ

ನೀನಿರುವ ಎಡೆಯಲ್ಲಿ ಎನಗಿನಿತು ಎಡೆಯಿರಲಿ
ವೇದಶಾಸ್ತ್ರಗಳೆಲ್ಲ ಅವರ ಮಡಿಲೊಳಗಿರಲಿ
ಅವರೊಡನೆ ಯುಕ್ತಿಮುಕ್ತಿಯ ಪಡೆವ ಸುಖಕಿಂತ
ನಿನ್ನೊಡನೆ ವೇದಬಾಹಿರ ನರಕ ಸುಖವಯ್ಯ.

—ಎಂ. ಆರ್. ಶ್ರೀನಿವಾಸಮೂರ್ತಿ

# ದಾರಿಯ ಬೆಳಕು

ನೋಡಬಾರದೆ ಅಲ್ಲಿ ಬರುತಿರುವ ಜನವೃಂದ!
ಬಾಗಿ ಮಣಿಯುವರೆಲ್ಲ ನಮಿಸಿ ನಮಿಸಿ!
ನೂರಾರು ಜನರಿಂದು ಬುದ್ಧದೇವನ ನುಡಿಯ
ಬೋಧನಾಮೃತಪಾನ ಮಾಡುತಿಹರು.

ನಿಶ್ಶಬ್ದ ಎಲ್ಲೆಲ್ಲು ನಿಶ್ಚಲವು ಸುತ್ತೆಲ್ಲ
ಕೊಳಲ ಗಾನದ ಮೊದಲ ನೀರವತೆಯು
ನೋಡೆಮ್ಮ ದೇವನನು ಅರೆಗಣ್ಣಿನಿಂ ಕಾಂಬ
ಅತಿಕರುಣೆಯಿಂದೊರೆವ ಒಡಲ ಒಸಗೆ

ಉಸುರಿದನು ನಾಲ್ಕು ನುಡಿ; ನಾಲ್ಕು ನುಡಿಯೊಳಗಿಷ್ಟು
ನಾಲ್ಕು ಯುಗಕೂ ಸಲುವ ಸತ್ಯವಿಷಯ;
ಸತ್ಯವೆ ಅಹಿಂಸೆಯೇ ಇಂದ್ರಿಯದ ನಿಗ್ರಹವೆ
ಜಗ ಮಾಯೆ ಎಂಬರಿವೆ ಸುಖದ ಹಾದಿ.

ನಾಲ್ಕು ನುಡಿಗಳು. ನಿಜವು. ಆಡಿದುದು ಹೆಚ್ಚಲ್ಲ.
ಕೇಳಿದರು ಜನರೆಲ್ಲ ಮೆಚ್ಚಿ ನಿಂತು.
ನೋಡಿ ಸವಿಯುವರೆಲ್ಲ ಮುಖಬಿಂಬದೊಳು ಕಾಂಬ
ಭಾವಟೀಕೆಯೊಳಿರುವ ಜೇನ ಸವಿಯ.

ಎದ್ದು ನಿಂತರು ಎಲ್ಲ ಶುದ್ಧಭಾವದಿ ನಮಿಸಿ
ಸದ್ದಿರದೆ ಸರಿಸರಿದು ಸಾಗುತಿಹರು
ದೆಸೆದೆಸೆಗೆ ಒಬ್ಬೊಬ್ಬರೊಡೆದೊಡೆದು ಸಾಗುವರು
ಹೊಸತಾದ ಚೈತನ್ಯ ತುಂಬಿ ತುಳುಕಿ

ಎಲ್ಲೆಲ್ಲು ಸಾರುವರು ಬುದ್ಧದೇವನ ಸೂತ್ರ
ತಳಮಳಿಪ ಜಗಕಿಂದು ಬೆಳಕು ಬಂತು.
ಏನಿದುವೆ ನನ್ನ ದೊರೆ ಕಾಣದಾದನು? ಎಲ್ಲಿ?
ಕಂಡು ಕಾಣುತಲಿರಲು ಸರಿದನೆತ್ತ?

ಇನಿತೊಂದು ಶಿಷ್ಯರನು ನಡುನದಿಯ ಜಲದಲ್ಲಿ
ಕೈಯುಬಿಟ್ಟೋಡುವುದು ಘಾತವಲ್ಲೆ?
ತರವೊ ಪೇಳೆಲೊ ದೇವ? ಹಿಂಜರಿಯರೇನವರು?
ಗುರಿಯು ಸೇರುವ ಮುನ್ನ ತಳಮಳಿಸರೇನು?

ಇಲ್ಲಿಲ್ಲ, ನೀ ಹೋದರೂ ನಿನ್ನ ಜ್ಯೋತಿಮಯ
ತೇಜವದು ದಾರಿಯನು ಬೆಳಗುತಿಹುದು
ಎಂದು ಅಂಜದೆ ಅವರು ನಿನ್ನ ತತ್ತ್ವವ ಸಾರಿ
ಹಿಂದೊಂದು ಅಡಿಯಿಡದೆ ಸಾಗುತಿಹರು

—ಶಿವರಾಮ ಕಾರಂತ.

# ಅಶೋಕ

ಬುದ್ಧ ಬೋಧನೆಯದುವು ಹೋಯ್ತು ಕಣ್ಮರೆಯಾಯ್ತು
ಬರುವುದಿನ್ನೇನೆಂದು ಕಾಣೆ ನಾನು.
ಯಾರಿವರು ಕ್ರೂರ ಜನ ಕತ್ತಿ ಎತ್ತುತೆ ಬರುವ
ರಾರಿವರು ಅಂಧರೇ? ಏನು ಕೆಲಸ?

ಶಾಂತಿ ತುಂಬಿದ ಮನೆಯ ಹಾಲು ಹಳಿಸಲು ಬಂದ
ಭ್ರಾಂತ ಜನರಿವರಾರು? ಬೇಕದೇನು?
ಎಂಥ ಮರುಳರು ಇವರು? ಏನು ಮತ್ತರು ಇವರು?
ನಿಂತ ನೆಲಕಾಗಿಯೇ ಕಾದುತಿಹರು.

ಇಲ್ಲಿಲ್ಲ ಕಾಣೆನ್ನೈ ರಕುತದಾ ಮಳೆಯಿದನು.
ಎಲ್ಲವಾಯಿತು ಹೋಮ ನೀರ ಮೇಲೆ
ಕುಂಬಾರನವನೇಳು ವರುಷ ಸಾಹಸ ಮಾಡಿ,
ಕಾಲಚಕ್ರದ ಗತಿಯ ತಿಳಿದು ತಂದ.

ದಿವ್ಯ ಶಾಂತಿಯ ಕುಂಭ ನಿಮಿಷದೊಳು ಚೂರಾಯ್ತು
ಆಸೆಯೆಂಬುದು ತೊಳೆದು ನೀರಾದುದು.
ಯಾರಿವನು ಮತ್ತ ದೊರೆ ಕ್ರೂರ ಕ್ಷತ್ರಿಯನಿವನು
ಯಾರೆನಲಿ ಅಶೋಕನೆಂಬ ಹೆಸರೇ?

ಸುಳ್ಳಿದುವು ಸುಳ್ಳಿದು ಅಶೋಕ ನರಪತಿಯಲ್ಲ
ಶೋಕಕಾರಕನಿವನು ಕಾಕುಮತಿಯು.
ಹಿಗ್ಗಿ ನಿಂತನು ನೋಡು ವೈರಿಗಳ ಸದೆಬಡಿದು.
ಹೊತ್ತು ಒಯ್ವನೆ ನೆಲನ ಮರಣ ಬರಲು?

ಏನಿದುವೆ ಅಚ್ಚರಿಯು ಎತ್ತಿ ನಿಂತಿಹ ಕತ್ತು!
ತತ್ತರಿಸಿ ಬಾಗಿತೆಲೆ ಸುತ್ತನೋಡಿ.
ಕತ್ತಿ ಈಟಿಯ ಕಂಡು, ಕೆಡೆದ ನೆತ್ತರ ಕಂಡು,
ಮುದುರಿ ಮಣ್ಣಾದನೈ ಅಂಥನಲ್ಲ.

"ನಿಲ್ಲಿಸಿರಿ ನಿಲ್ಲಿಸಿರಿ" ಮತ್ತನಿವನಾಳುಗಳೆ
ತನ್ನರಿಪುದೆನ್ನನೀ ರಕ್ತಪಾತ
ಸಾವು ಸೋಲುಗಳನ್ನು, ನೋವು ನರಳ್ವಿಕೆಯನ್ನು
ಯಾವಾವ ದೆಸೆಗೆಸೆವ ಹಿಂಸೆಯಿಂದ.

ನಾವು ಕಾಣೆವು ಶಾಂತಿ ಮರುಳನಾಗಿರ್ದೆನೈ
ಹಿರಿಬುದ್ಧನಾಡಿ ಪೋದನು ಮರೆತು ನಿಂದೆ.
ಬಾಡಿದನು, ಬಗ್ಗಿದನು, ಧರೆಗೆ ಕಾಲೂರಿದನು,
ಮೇಲು ಮುಖವನು ಮಾಡಿ ಬೇಡುತಿಹನು.

ಪಾವನಾತ್ಮಕ ಬುದ್ಧ ನೀನೆ ಕಾಯಲು ಬೇಕು
ನಿನ್ನ ಒಸಗೆಯ ಬೆಳಕೆ ಎನಗೆ ಬೆಳಕು.
ನಿನ್ನ ತತ್ವವದಿನ್ನು ಜೀವನಕೆ ಸರ್ವಸ್ವ
ನಿನ್ನ ಸೇವೆಯೆ ಎನ್ನ ರಾಜಧರ್ಮ.

ಎಂದು ನುಡಿಯುತೆ ದೊರೆಯು ತಾನಲ್ಲಿ ಪೋದನೈ.
ಅದು ಯಾರು ಬಂದವರು ಪೇಳಿರ್ರೈಯ?
ರಾಜದೂತರು ಇವರು ಏನು ಓದುತಲಿಹರು
ನಾಲ್ಕು ದೆಸೆಗಳ ಕೂಗಿ ಸಾಗುತಿಹರು?

ನಿಜವಿಹುದು ಇವರೆಲ್ಲ ಅಶೋಕನಾಳುಗಳೈ;
ಬುದ್ಧಸಂದೇಶವನು ಸಾರುತಿಹರು. . . . .

—ಶಿವರಾಮ ಕಾರಂತ

# ಅಶೋಕ ವಾಣಿ

ಧರ್ಮ ಒಳ್ಳೆಯದು.

ಧರ್ಮವೆಂದರೆ ಯಾವುದು? ಅಲ್ಪ ಆಸ್ರವ, ಬಹು ಕಲ್ಯಾಣ, ದಯೆ, ದಾನ, ಸತ್ಯ ಮತ್ತು ಶೌಚ—ಇದು ಧರ್ಮ.

ದಯೆ, ದಾನ, ಸತ್ಯ, ಶೌಚ, ಮಾರ್ದವ, ಸಾಧುತ್ವಗಳು ಲೋಕ ದಲ್ಲಿ ವೃದ್ಧಿಯಾಗುವುದು ಧರ್ಮಕಾರ್ಯ, ಧರ್ಮಾಚರಣೆ.

ಶೀಲವಿಲ್ಲದವನಿಗೆ ಧರ್ಮಾಚರಣೆ ಆಗುವುದಿಲ್ಲ.

* * * *

ಕಲ್ಯಾಣ ಮಾಡುವುದು ಕಷ್ಟ. ಕಲ್ಯಾಣವನ್ನು ಮೊದಲುಮಾಡಿ ದವನು ಮಾಡಲು ಕಷ್ಟವಾದುದನ್ನು ಮಾಡುವನು....ಇದರಲ್ಲಿ ಒಂದು ಚೂರನ್ನಾದರೂ ಮರೆತವನು ಕೆಟ್ಟ ಕೆಲಸ ಮಾಡುವನು. ಪಾಪ ಮಾಡುವುದು ಸುಲಭ. ಪಾಪವೆಂಬುದು ಸುಲಭವಾಗಿ ಹೆಜ್ಜೆಯಿಡುತ್ತದೆ.

'ಈ ಕಲ್ಯಾಣ ನನ್ನಿಂದ ಆಯಿತು' ಎಂದು ಜನ ತಾವು ಮಾಡಿದ ಕಲ್ಯಾಣವನ್ನೇ ನೋಡುವರು. 'ಈ ಪಾಪ ನನ್ನಿಂದ ಆಯಿತು. ಇದಕ್ಕೇ ಆಸ್ರವವೆಂದು ಹೆಸರು' ಎಂದು ಪಾಪವನ್ನು ನೋಡುವುದಿಲ್ಲ. ಇದನ್ನು ಕಾಣುವುದು ಕಷ್ಟ, ದಿಟ. ಆದರೆ, 'ಚಂಡತ್ವ, ನಿಷ್ಠುರತೆ, ಕ್ರೋಧ, ಮಾನ, ಈರ್ಷ್ಯೆ ಎಂಬ ಇವಕ್ಕೆ ಆಸ್ರವಗಾಮಿನಿಯೆಂದು ಹೆಸರು. ಈ ಕೊಳೆಗಳಿಂದ ನನ್ನನ್ನು ನಾನು ಕೆಡಿಸಿಕೊಳ್ಳುವುದು ಬೇಡ' ಎಂದು ಅದನ್ನು ಕಾಣಲೇಬೇಕು. 'ಇದು ನನ್ನ ಇಹಕ್ಕೆ, ಇದು ನನ್ನ ಪರಕ್ಕೆ' ಎಂದು ಇದನ್ನು ಚೆನ್ನಾಗಿ ಕಾಣಬೇಕು.

* * * *

ತಾಯಿತಂದೆಯ ಶುಶ್ರೂಷೆ ಒಳ್ಳೆಯದು. ಮಿತ್ರರು, ಪರಿಚಿತರು, ಜ್ಞಾತಿಗಳು, ಬ್ರಾಹ್ಮಣರು, ಶ್ರಮಣರು—ಇವರಿಗೆ ದಾನ ಒಳ್ಳೆಯದು. ಪ್ರಾಣಿಗಳನ್ನು ಕೊಲ್ಲದಿರುವುದು ಒಳ್ಳೆಯದು. ಕೊಂಚ ವೆಚ್ಚಮಾಡು ವುದೂ ಕೊಂಚ ಕೂಡಿಡುವುದೂ ಒಳ್ಳೆಯದು.

ತಾಯಿತಂದೆಯನ್ನೂ ದೊಡ್ಡವರನ್ನೂ ಶುಶ್ರೂಷಿಸತಕ್ಕದ್ದು. ಪ್ರಾಣಿಗಳನ್ನು ಕಾಪಾಡತಕ್ಕದ್ದು. ಸತ್ಯ ಹೇಳತಕ್ಕದ್ದು. ಈ ಧರ್ಮ ಗುಣಗಳನ್ನು ಬೆಳಸತಕ್ಕದ್ದು. ಇದರಂತೆಯೇ ಶಿಷ್ಯರು ಆಚಾರ್ಯರನ್ನು ಗೌರವಿಸತಕ್ಕದ್ದು. ಜ್ಞಾತಿಗಳಲ್ಲಿ ತಕ್ಕ ರೀತಿಯಿಂದ ನಡೆಯತಕ್ಕದ್ದು. ಇದು ಬಹುಕಾಲದಿಂದ ಸಹಜವಾದುದು. ಇದರಿಂದ ದೀರ್ಘಾಯುಸ್ಸು. ಹೀಗೆ ಮಾಡತಕ್ಕದು.

ದಾಸರಲ್ಲೂ ಭೃತ್ಯರಲ್ಲೂ ಸರಿಯಾಗಿ ನಡೆದುಕೊಳ್ಳುವುದು ಒಳ್ಳೆಯದು. ತಾಯಿತಂದೆಯ ಶುಶ್ರೂಷೆ ಒಳ್ಳೆಯದು. ಮಿತ್ರ, ಸಹವಾಸಿ, ಜ್ಞಾತಿ, ಬ್ರಾಹ್ಮಣ, ಶ್ರಮಣ—ಇವರಿಗೆ ದಾನಮಾಡುವುದು ಒಳ್ಳೆಯದು. ಪ್ರಾಣಿಗಳನ್ನು ಕೊಲ್ಲದಿರುವುದು ಒಳ್ಳೆಯದು.

ಇದನ್ನು ಕುರಿತು ತಂದೆಯಾಗಲಿ ಮಗನಾಗಲಿ ಭ್ರಾತೃವಾಗಲಿ ಮಿತ್ರ ಸಹವಾಸಿ ಜ್ಞಾತಿಗಳಾಗಲಿ, ಅಕ್ಕಪಕ್ಕದವರು ಕೂಡ 'ಇದು ಒಳ್ಳೆಯದು, ಇದು ಕರ್ತವ್ಯ' ಎಂದು ಹೇಳತಕ್ಕದು.

ಹೀಗೆ ಮಾಡಿದರೆ, ಆ ಧರ್ಮದಾನದಿಂದ ಇಹದಲ್ಲಿ ಆರಾಧಿತ ನಾಗುವನು, ಪರದಲ್ಲಿ ಅನಂತ ಪುಣ್ಯವಾಗುವುದು.

ಧರ್ಮದಾನದಂತಹ ದಾನವಾಗಲಿ, ಧರ್ಮಸಹವಾಸದಂತಹ ದಾಗಲಿ, ಧರ್ಮಸಂವಿಭಾಗದಂತಹದಾಗಲಿ, ಧರ್ಮಸಂಬಂಧದಂತಹ ದಾಗಲಿ ಬೇರೆ ಇಲ್ಲ.

ಅಗಾಧವಾದ ಧರ್ಮಕಾಮತೆ, ಅಗಾಧವಾದ ಪರೀಕ್ಷೆ, ಅಗಾಧ ವಾದ ಶುಶ್ರೂಷೆ, ಅಗಾಧವಾದ ಭಯ ಮತ್ತು ಅಗಾಧವಾದ ಉತ್ಸಾಹ ಗಳಿಂದಲ್ಲದೆ ಇಹಪರಗಳನ್ನು ಪಡೆಯುವುದು ಕಷ್ಟ.

*    *    *    *

ಕಾಯಿಲೆಯಾದಾಗ, ಮದುವೆಗಳಾದಾಗ, ಮಗು ಹುಟ್ಟಿದಾಗ ಮತ್ತು ಪಯಣ ಹೊರಟಾಗ ಜನರು ವಿವಿಧ ಮಂಗಲಗಳನ್ನು ಮಾಡು ತ್ತಿರುವರು.

ಮಂಗಲಗಳು ಮಾಡತಕ್ಕುವೇ. ಆದರೆ ಇಂತಹ ಮಂಗಲಗಳಿಂದ ಫಲ ಅಲ್ಪ. ಈ ಮಂಗಲದಿಂದ, ಧರ್ಮಮಂಗಲದಿಂದ ಫಲ ಹೆಚ್ಚು.

ದಾಸರಲ್ಲೂ ಭೃತ್ಯರಲ್ಲೂ ಚೆನ್ನಾಗಿ ನಡೆದುಕೊಳ್ಳುವುದೂ ಗುರುಗಳನ್ನು ಗೌರವಿಸುವುದೂ ಒಳ್ಳೆಯದು. ಪ್ರಾಣಿಗಳಲ್ಲಿ ಸಂಯಮ ಒಳ್ಳೆಯದು. ಬ್ರಾಹ್ಮಣರಿಗೆ ಶ್ರಮಣರಿಗೆ ದಾನ ಒಳ್ಳೆಯದು. ಇವುಗಳಿಗೂ ಇಂತಹ ಬೇರೆಯವಕ್ಕೂ ಧರ್ಮಮಂಗಲಗಳೆಂದು ಹೆಸರು.

ಆದ್ದರಿಂದ ತಂದೆಯಾಗಲಿ ಮಗನಾಗಲಿ, ಭ್ರಾತೃವಾಗಲಿ, ಸ್ವಾಮಿಯಾಗಲಿ 'ಇದು ಒಳ್ಳೆಯದು. ಗುರಿ ಕೈಗೂಡುವ ತನಕ ಇದು ಮಾಡತಕ್ಕುದು' ಎಂದು ಹೇಳುವುದು ತಕ್ಕದ್ದು.

ದಾನ ಒಳ್ಳೆಯದೆಂದೂ ಹೇಳಲಾಗಿದೆ. ಆದರೆ ಧರ್ಮದಾನದಂತಹ ದಾನವಿಲ್ಲ, ಧರ್ಮಾನುಗ್ರಹದಂತಹ ಅನುಗ್ರಹವಿಲ್ಲ. ಆದ್ದರಿಂದ ಮಿತ್ರನಾಗಲಿ, ಸುಹೃದಯನಾಗಲಿ, ಜ್ಞಾತಿಯಾಗಲಿ, ಸಹಾಯಕನಾಗಲಿ, ಆಯಾ ಪ್ರಕರಣದಲ್ಲಿ 'ಇದು ಮಾಡತಕ್ಕುದು—ಇದು ಒಳ್ಳೆಯದು. ಇದರಿಂದ ಸ್ವರ್ಗ ಹೊಂದಬಹುದು' ಎಂದು ತಿಳಿಯಹೇಳಬೇಕು. ಈ ಸ್ವರ್ಗ ಪಡೆಯುವುದಕ್ಕಿಂತ ಹೆಚ್ಚಿನ ಕರ್ತವ್ಯ ಯಾವುದು?

ಇತರ ಮಂಗಲಗಳ ಫಲ ಸಂಶಯ: ತನ್ನ ಗುರಿಯನ್ನು ಪಡೆಯಬಹುದು, ಅಥವಾ ಇಲ್ಲ. ಅವು ಇಹಲೋಕದವು ಮಾತ್ರ. ಆದರೆ ಈ ಧರ್ಮಮಂಗಲವು ಅಕಾಲಿಕವಾದುದು. ಇಲ್ಲಿ ಗುರಿಯನ್ನು ಪಡೆಯದಿದ್ದರೂ ಪರದಲ್ಲಿ ಅನಂತ ಪುಣ್ಯ ಜನಿಸುವುದು. ಇಲ್ಲಿ ಗುರಿಯನ್ನು ಪಡೆದರು ಕೂಡ, ಎರಡು ಲಾಭ ಆಗುವುದು: ಆ ಧರ್ಮಮಂಗಲದಿಂದ ಇಲ್ಲಿ ಗುರಿ ಲಭಿಸುವುದು, ಪರದಲ್ಲಿ ಅನಂತ ಪುಣ್ಯ ಜನಿಸುವುದು.

ಕ್ಷುದ್ರಕನಾದವನಿಗೆ ಕೂಡ ಪರಾಕ್ರಮದಿಂದ ವಿಪುಲವಾದ ಸ್ವರ್ಗವನ್ನು ಪಡೆಯುವುದು ಶಕ್ಯ.

*   *   *   *

ದೇವಾನಾಂಪ್ರಿಯ ಪ್ರಿಯದರ್ಶಿ ರಾಜನು ಎಲ್ಲ ಮತದವರನ್ನೂ ಸನ್ಯಾಸಿಗಳನ್ನೂ ಗೃಹಸ್ಥರನ್ನೂ ಪೂಜಿಸುವನು. ದಾನಗಳಿಂದಲೂ ವಿವಿಧ ಪೂಜೆಗಳಿಂದಲೂ ಅವರನ್ನು ಪೂಜಿಸುವನು.

ಆದರೆ ಸರ್ವಮತಗಳ ಸಾರವೃದ್ಧಿಯನ್ನು ಹೇಗೋ ಹಾಗೆ ಆ ದಾನವನ್ನಾಗಲಿ ಪೂಜೆಯನ್ನಾಗಲಿ ದೇವಾನಾಂಪ್ರಿಯನು ಎಣಿಸುವುದಿಲ್ಲ.

ಸಾರವೃದ್ಧಿ ಬಹುವಿಧಗಳಲ್ಲಿ ಆಗಬಹುದು.

ಅದಕ್ಕೆ ಮೂಲ ವಚನಗುಪ್ತಿ: ಎಂದರೆ, ತನ್ನ ಮತದ ಪೂಜೆಯಾಗಲಿ ಪರಮತದ ನಿಂದೆಯಾಗಲಿ ಪ್ರಕರಣದಲ್ಲಿಯಲ್ಲದೆ ಆಗದು. ಆಯಾ ಪ್ರಕರಣದಲ್ಲಿ ಕೂಡ ಲಘುವಾಗಿರಬೇಕು. ಆಯಾ ಪ್ರಕರಣಗಳಲ್ಲೂ ಪರಮತಗಳನ್ನು ಪೂಜಿಸಲೇಬೇಕು.

ಹೀಗೆ ಮಾಡಿದರೆ ತನ್ನ ಮತ ಬೆಳೆಯುವುದು, ಪರಮತಕ್ಕೆ ಉಪಕಾರವಾಗುವುದು. ಇದರಿಂದ ಬೇರೆ ಮಾಡಿದರೆ ತನ್ನ ಮತ ಕತ್ತರಿಸಿ ಹೋಗುವುದು, ಪರಮತಕ್ಕೆ ಅಪಕಾರವಾಗುವುದು.

ಯಾವನು ಕೇವಲ ತನ್ನ ಮತದಲ್ಲಿ ಭಕ್ತಿಯಿಂದ, ತನ್ನ ಮತವನ್ನು ಬೆಳಗುತ್ತೇನೆಂದು, ತನ್ನ ಮತವನ್ನು ಪೂಜಿಸಿ ಪರಮತವನ್ನು ನಿಂದಿಸುವನೋ—ಅವನು ಹಾಗೆ ಮಾಡಿದರೆ, ಅವನು ತನ್ನ ಮತಕ್ಕೇ ಬಹು ಹೆಚ್ಚು ಘಾಸಿಮಾಡುವನು.

ಆದ್ದರಿಂದ ಸಮವಾಯವೇ ಒಳ್ಳೆಯದು—ಎಂದರೆ, ಒಬ್ಬರು ಇನ್ನೊಬ್ಬರ ಧರ್ಮವನ್ನು ಕೇಳಬೇಕು, ಶುಶ್ರೂಷೆ ಮಾಡಬೇಕು. ಇದೇ, —ಎಲ್ಲ ಮತದವರೂ ಬಹುಶ್ರುತರಾಗಲಿ, ಕಲ್ಯಾಣಗಾಮಿಗಳಾಗಲಿ ಎಂಬುದೇ—ದೇವಾನಾಂಪ್ರಿಯನ ಇಚ್ಛೆ.

ಆದುದರಿಂದ ತಮ್ಮತಮ್ಮದರಲ್ಲಿ ಪ್ರಸನ್ನರಾದವರಿಗೆ 'ಎಲ್ಲಾ ಮತಗಳ ಸಾರವೃದ್ಧಿಯನ್ನು ಹೇಗೋ ಹಾಗೆ ದಾನವನ್ನಾಗಲಿ ಪೂಜೆಯನ್ನಾಗಲಿ ದೇವಾನಾಂಪ್ರಿಯನು ಎಣಿಸುವುದಿಲ್ಲ' ಎಂದು ಹೇಳತಕ್ಕುದು.

ಇದು ಅದರ ಫಲ: ತನ್ನ ಮತ ಬೆಳೆಯುವುದು, ಧರ್ಮ ಬೆಳಗುವುದು.

ಲೋಕದ ಹಿತಸುಖಗಳಿಗಾಗಿ ಈ ಧರ್ಮಲಿಪಿಯನ್ನು ಬರೆಸಲಾಯಿತು.

ಲೋಕಹಿತಕ್ಕಿಂತ ಹೆಚ್ಚಿನ ಕೆಲಸವಿಲ್ಲ. ಅಗಾಧವಾದ ಪರಾಕ್ರಮದಿಂದಲ್ಲದೆ ಇದನ್ನು ಮಾಡುವುದು ಕಷ್ಟ.

ಇದರಲ್ಲಿ ಕೆಲವನ್ನು ಅವುಗಳ ಮಾಧುರ್ಯಕ್ಕಾಗಿ, ಜನರು ಅದರಂತೆ ನಡೆಯಲೆಂದು, ಪುನಃ ಪುನಃ ಹೇಳಲಾಗಿದೆ.

—**ಅಶೋಕನ ಶಾಸನ**ಗಳಿಂದ

# ಅ-ಮೃತ

ಎಲ್ಲೆಲ್ಲು ತಮ ಬಂತು ನಿಶ್ಶಬ್ದ ಮುರಿಯಿತ್ತೈ
ಎಲ್ಲೆಲ್ಲು ಭೀಕರದ ಕೂಗೆ ಕೂಗು
ಬುದ್ಧ ಭಿಕ್ಕುಗಳಿಲ್ಲ, ಬದ್ಧ ಜೀವರು ಎಲ್ಲ
ಬಿದ್ದುರುಳುತಿಹುವಯ್ಯ ಜೀವಗಣವು

ದಾರಿದ್ರ್ಯ ಹಿಂಸೆಗಳು ಕಿವಿಯೊಡೆವ ಕೂಗುಗಳು
ಯಾವಾವ ಎಡೆಗೆಡೆಗು ಕೇಳುತಿಹುವು
ಕಾಮಿನಿಗೆ ಕಾಂಚನಕೆ ಹಾಳು ಬಿದ್ದಿಹ ನೆಲಕೆ
ತಾ ಮೇಲೆ ತಾ ಮೇಲೆ ಓಡುತಿಹರು

ಹಂಚಿ ತಿನ್ನುವ ಬದಲು ಹರಿದು ತಿಂಬರು ಎಲ್ಲ
ಸಂತಸದ ಉದ್ಯಾನ ಬಾಡಿ ಬಿತ್ತು
ಮನೆಯೆಲ್ಲ ಮುರಿದುರಿದು ಮಸಣವಾಯಿತು ದೇವ,
ಮನವೆಲ್ಲ ಮುದುಡಿ ಬರಿ ಮಣ್ಣೆ ಆಯ್ತು

ಇದು ಏನು ಕಾಲನಾ ಕುಟಿಲ ಮಾಟದ ಆಟ
ಕೇಳಿಸದೆ ನಿನಗಿದರ ಘೋರ ನಾದ?
ಎಲ್ಲಿ ನೋಡಿದರಲ್ಲಿ ಎಲುಬು ಮಾಂಸದ ರಾಶಿ
ಎಲ್ಲಿ ನೋಡಿದರಲ್ಲಿ ಕಠಿಣ ಘಾಸಿ.

ಕಾಣೆನಿದ ಕಾಣೆನಿದ ಹರಿಸಬೇಡೆಲೊ ಎನ್ನ
ಸುಖದ ಕನಸನು ಇಂತು ಜೀವ ಕೆಡಿಸಿ.
ಯಾರ ಕಳುಹಿದೆಯಪ್ಪ? ಹೆಜ್ಜೆಯಿಡುತಲಿ ಬರುವ.
ಮಾರಿತಾಯಿಗೆ ಇವನು ಬಂದ ಬಲಿಯೆ?

ಬಾಡಿ ಬಳಲಿದ ಕಾಯ, ತೀರ ಬಗ್ಗುವ ದೇಹ,
ಸಾವಿನಾ ಗೆಳೆಯನಿವನೇಕೆ ಬಂದ?
ಅಂಜಿಕೆಯ ತೋರದೆಯೆ ಚಂಚಲನದಾಗದೆಯೆ
ಹಿಂದಿಷ್ಟು ನೋಡದೆಯೆ ಹೋಗುತಿಹನು

ಅಲ್ಲಿ ನಿಂತನು ನೋಡು ನಡು ಕದನ ಭೂಮಿಯಲಿ
ಮೊರೆಮೊರೆದು ಬರುತಲಿದೆ ಆರ್ತನಾದ
ಕೇಳುತಿಹನೆಲ್ಲವನು ನೋಡುತಿಹನೆಲ್ಲವನು
ಕರುಣೆಯಿಂ ಸವರುವನು ಬಿದ್ದ ಜನರ

ಗಗನಮಂಡಲ ಕಂಡು ಕುಳಿತುಬಿಟ್ಟನು ನೋಡು
ಕೆನ್ನೀರ ತೊಳೆಯುವನು ಕಣ್ಣ ಹನಿಗೆ
ಹೇಡಿಯಿವನಿಹನ್ನೈಯ ಅಳುಬುರುಕನಿವನ್ನೈಯ
ಅತ್ತವರಿನೇನಾಯ್ತು ಸತ್ತ ಜನಕೆ?

ಅತ್ತು ಬಾಡಿದ ಕಣ್ಣು ಬಾಗಿ ಬಗ್ಗಿಹ ಬೆನ್ನು
ಎತ್ತಣಿಂ ತಂದೀತು ಶಾಂತಿಹೊನ್ನು?
ಏನಿವನು ತವಸಿಯೆ? ಎದ್ದು ನಿಂತನು ತಿರುಗಿ
ಮೊದ್ದುತನವಿಷ್ಟಿಲ್ಲ ಧೀರ ವೀರ.

ಒಡಕು ಕಾಯದ ಹಿಂದೆ ಅಚಲ ಧೈರ್ಯದ ರಾಶಿ!
ಕಣ್ಣೀರ ಹನಿ ಹಿಂದೆ ಅಭಯವಾಣಿ!
ಕಂಪಿಸುವ ತುಟಿಯಿಂದ ಸಂದೇಶವೇನೊರೆವ?
ಬಾಯಾರಲಿದು ಒಂದು ಬೋಳುಗೆಲಸ.

ಮುದ್ದು ಸಿಡಿಗುಂಡು ಗುಡುಗಿನ ಮೊಳಗಿನಿಂದೆದ್ದು
ಒಡಲ ಬುಗ್ಗೆಯನೊಡೆದು ಬರುವ ದನಿಯ
ಜಡಮತಿಗಳೀ ಜನಕೆ ಕೇಳಿಸುವ ಬಗೆಯೆಂತು ?
ಕೇಳಿದರು ಮತ್ತವರು ತಡೆವುದೆಂತು ?

ಏನಿದುವೆ ವೈಚಿತ್ರ್ಯವೊಂದೊಂದೆ ಕಾಣುತಿದೆ !
ಮಾನವನ ಮರಿಯಿವನು ಜ್ಞಾನಿಯೇನು !
ಎಲ್ಲವದು ತಾನೀಗ ನಿಶ್ಶಬ್ದಗೊಳ್ಳುತಿದೆ
ಎಲ್ಲೆಲ್ಲು ಲಾಲಿಸುವ ಹಿರಿಯ ಆಸೆ

ಬಳಲಿ ಕಂಗೆಟ್ಟಿರುವ ಬಡಿದು ಕಡು ಕೆಟ್ಟಿರುವ
ಜಗಕೆ ನಿನ್ನುಳಿದನ್ಯ ಗತಿಯದೆಲ್ಲಿ ?
ಏನೆಂದರಲ್ಲೀಗ ಗಾಂಧಿಯೆಂದೊರೆದರೆ
'ಸತ್ಯವು ಅಹಿಂಸೆ' ಗಳ ತಾತನಿವನೆ.

ನಾನೆಂಬೆ ನಾನೆಂಬೆ ಗಾಂಧಿಯಿವನಲ್ಲಲ್ಲ
ಈ ತತ್ತ್ವ ಹೊಸದಲ್ಲ, ಬಲ್ಲೆನದನು.
ಈ ಬೀಜವನು ಬಿತ್ತಿ ನೀರೆರೆದು ಹೋಗಿಹನು
ಕಾಲಲಹರಿಯ ಹಿಂದೆ ಬುದ್ಧದೇವ.

ಮತ್ತದುವೆ ಚಿಗುತುದನು ಕಣ್ಣಾರೆ ಕಂಡಿಹೆನು
ಮತ್ತೆ ತಳೆದಿಹ ಕಾಯ ಹಣ್ಣ ಕಂಡೆ
ಸುತ್ತಲಿನ ಜಗಕಿದ್ದ ಹಸಿವು ಹಿಂಗಿತು ಕಂಡೆ
ತುತ್ತಾಯಿತೇನದುವೆ ಕಾಲಗತಿಗೆ?

ಅದಕಾಗಿ ಜನರಿಂದು ಹಸಿದು ಹಿಂಗಿರಬೇಕು
ಅದುವೆ ಮರವನು ತಿರುಗಿ ಬೆಳೆಸಲೆಳಸಿ
ನೆತ್ತರಿನ ರಣಭೂಮಿಯೊಳು ಹುಡುಕಿ ಕಂಡನ್ನೈ
ಬಿತ್ತೊಂದ ಗಳಿಸಿದನು ಗಾಂಧಿಯಿವನು

ಕಣ್ಣೀರನೆರೆಯುತ್ತೆ ಬಿತ್ತಿದನು ಬೀಜವನು
ಚಿಗುರುತಿದೆ ಚಿಗುರುತಿದೆ ಗಿಡವು ತಿರುಗಿ
ನಿಶ್ಚಯವು ನಿಶ್ಚಯವು ಹೊಸತು ಅಲ್ಲವು ಇದುವು
ಅತ್ತೊಂದು ದಿನ ಹೊರಟ ಬೌದ್ಧಯಾತ್ರೆ

—ಶಿವರಾಮ ಕಾರಂತ

# ಮಹಾತ್ಮರ ಉಪವಾಸ

[ರಕ್ತಾಕ್ಷಿ ಸಂ।ದ ಭಾದ್ರಪದ ಬ। ೫ (೧೮-೯-೧೯೨೪)ಯಿಂದ ಆಶ್ವೀಜ ಶು। ೧೧ (೮-೧೦-೨೪)ಯ ವರೆಗೆ ಮಹಾತ್ಮಾ ಗಾಂಧಿಯವರು ಧಿಲ್ಲಿಯಲ್ಲಿ ಮಾಡಿದ ೨೧ ದಿನಗಳ ಉಪವಾಸ]

ಮುಂಜಿನೇಕಾಂತದಲಿ ಶ್ರೀಹರಿಯ ಹಂಬಲಿಸಿ,
ಹೃದಯ ಕ್ಷುಧೆಯನ್ನೂಡುತೊಡಲ ಹಸಿವಿಂದಂ,
ಮನದ ರಂಭೆಯ ಗೆದ್ದು ಶುಕನಾತನನ್ನೊಲಿಸಿ
ಭಕ್ತಿಗಂಗೆಯ ಭಾರತದ ತೃಷೆಗೆ ತಂದಂ

ಉರುವೇಲೆಯರಳಿಯಡಿಯಲಿ ಚಿರಂ ಹಸಿದರೆದು,
ಮಾರನಂ ಮುರಿದು ಸಂಬುದ್ಧನೆಮಗಗ್ಗಂ
ನಿಬ್ಬಾಣವೊಂದೆ, ತಣ್ಣೆಯರಣ್ಯಮಂ ತರಿದು,
ತೋರ್ದನರಿಯಟ್ಟಂಗಿಕದ ಧಮ್ಮಮಗ್ಗಂ.

ಕಟ್ಟಳೆಯ ಕುರುಡಿನಲಿ ಬೆಳಕಿನೊಡೆಯನ ಸೋಸು
ವೆಮ್ಮೆದೆಯ ಪರೆಯ ಹರೆದೆಮ್ಮೊಳಗೆ ನಿಸದಂ
ನೆಲಸಿರುವ ಸ್ವಾರಾಜ್ಯವೆಮಗೆ ತೋರಿಸೆ ಯೇಸು
ಯೋರ್ದನಿನ ಬನದಿ ನಲವತ್ತು ದಿನ ಹಸಿದಂ.

ಅರಬರೆದೆಯರಬಿಂದ ನೊಂದು, ನವಜೀವನವ
ನುಪವಾಸದಿಂದರಸಿ ಹಿರೆಯ ಕಂದರಿಯಿಂ
ದೇವರಲ್ಲದೆ ದೇವರಿಲ್ಲೆಮ್ಮ ಕಾವನವ
ನೆಂಬ ಸತ್ಯದಿ ಕಂಡನದನರಬರೆರೆಯಂ

ಗುರುವೆ ಇಪ್ಪತ್ತೊಂದು ದಿನದುಪ್ಪೋಷ್ಯವ ನೋಂತು
ಧಿಲ್ಲಿಯಿಂ ನೀ ಚೆಲ್ಲಿದೀ ಪ್ರೇಮ ಬೀಜಂ
ಭಾರತದ ಭಾಗ್ಯಲತೆಯಾಗಿ ಮಡಲಿಡದೆಂತು?
ಬೆಳಸದೆಂತಮರ ಸೌದರ್ಯಮಿದು ಸಾಜಂ?

—**ಗೋವಿಂದ ಪೈ.**

**ದೇವದತ್ತ**—ನಂದ, ತೊಟ್ಟ ಬಾಣವನ್ನು ಹಿಂದಿರುಗಿಸುವುದು ನನಗೇನೋ ವೀರೋಚಿತವಾಗಿ ತೋರುವುದಿಲ್ಲ.

**ನಂದ**—ನೀನಾವಾಗಲು ಸಿದ್ಧಾರ್ಥಕುಮಾರನಲ್ಲಿ ತಪ್ಪುಗಳನ್ನೇ ಹುಡುಕುವೆ. ಜಿಂಕೆಯ ಮರಿಯು ಓಡಲಾರದೆ ಹಿಂದೆ ನಿಂತಿತು. ಆಗ ಅದರ ತಾಯಿಯು ಮರಿಗೆ ಅಡ್ಡವಾಗಿ ಬಂದು ಕಾತರದೃಷ್ಟಿಯಿಂದ ನಮ್ಮನ್ನೇ ನೋಡುತ್ತಿತ್ತು. ದಯಾರ್ದ್ರಹೃದಯನಾದ ಸಿದ್ಧಾರ್ಥನು ನಿಟ್ಟುಸುರಿಟ್ಟು ಹೆದೆಯೇರಿಸಿದ ಬಿಲ್ಲನ್ನು ಕೆಳಗಿಳಿಸಿ ಅಂಬನ್ನು ಮುರಿದು ಬಿಸಾಡಿದನು. ಅದನ್ನು ನೋಡಿ ನನಗೂ ಕೂಡಾ ಬಾಣವನ್ನು ಬಿಡಲು ಮನಸ್ಸಾಗಲಿಲ್ಲ.

**ದೇವದತ್ತ**—ಹೇಡಿಗಳು! ಕೈಲಾಗದವರು ನೀವು. ನನಗಂತಹ ಅವಕಾಶವು ಸಿಕ್ಕಿದ್ದರೆ ಒಂದೇ ಅಂಬಿನಿಂದ ಎರಡನ್ನೂ ಕೊಂದುಬಿಡುತ್ತಿದ್ದೆನು.

[ಮೈತ್ರೇಯನು ಪ್ರವೇಶಿಸುವನು]

**ಮೈತ್ರೇಯ**—ಬಾಲಕರೆ, ಸಿದ್ಧಾರ್ಥಕುಮಾರನನ್ನು ನಿಂದಿಸಬೇಡಿರೆಂದು ನಾನು ನಿಮಗೆಷ್ಟು ಸಾರಿ ಹೇಳುವುದು? ಅವನು ರಾಜಪುತ್ರ. ಮುಂದೆ ಶಾಕ್ಯರ ಅರಸಾಗತಕ್ಕವನು. ಅವನನ್ನು ಕುರಿತು ನೀವಾಡುವ ಕುವಾಕ್ಯಗಳನ್ನು ಯಾರಾದರೂ ಕೇಳಿದರೆ ಅನರ್ಥವಾಗುವುದು.

**ದೇವದತ್ತ**—ನಿಜವನ್ನು ಹೇಳಲು ಭಯವೇನು? ಸಿದ್ಧಾರ್ಥನಂತೆ ನಾವೂ ರಾಜವಂಶೀಯರೇ. ಆದರೆ, ಒಂದು ಜಿಂಕೆಯ ಮರಿಯನ್ನು ಕೊಲ್ಲಲಾರದವನು ನಾಳೆ ಶಾಕ್ಯರನ್ನಾಳುವುದು ಹೇಗೆ?

**ಮೈತ್ರೇಯ**—ನೀನು ಬಹುತುಂಟ, ದೇವದತ್ತ. ಯಾವಾಗಲೂ ಹೀಗೆಯೇ ಆಡುವೆ. ಯಾರಾದರೂ ಕೇಳಿದರೆ—

**ದೇವದತ್ತ**—ಏನಾಗುವುದು?

**ನಂದ**—ಇದು ನಿನ್ನ ಸ್ವಭಾವ. ಬೆಳಗಾದ ಕೂಡಲೆ ಯಾರನ್ನಾದರೂ ಜಗಳಕ್ಕೆ ಹುಡುಕುವೆ. ಸಿದ್ಧಾರ್ಥನ ಸಂಗಡಿರುವವರೆಗೂ ಅವನು

ಮಾಡಿದುದೆಲ್ಲವೂ ಉಚಿತವೆಂದು ಕಾಣುವುದು. ಅವನು ನಿನ್ನ ಬಳಿ ಯಿಂದ ಹೋದರಾಯಿತು, ಈ ನಿಂದೆಗೆ ಪ್ರಾರಂಭ.

**ದೇವದತ್ತ**—ನಿನ್ನ ಸಮಾನರಿಲ್ಲವೆಂದು ಸಿದ್ಧಾರ್ಥನನ್ನು ಮುಖ ಸ್ತುತಿಮಾಡುತ್ತಾ ಹೊಗಳುಭಟ್ಟನಂತೆ ಕಾಲಕಳೆಯುವುದು ನಿನ್ನ ಅಭಿಮತ. ಅದು ನನ್ನಿಂದಾಗದು.

**ಮೈತ್ರೇಯ**—ಇಷ್ಟೊಂದು ದರ್ಪ ಬೇಡ, ದೇವದತ್ತ. "ಅತಿ ಸರ್ವತ್ರ ವರ್ಜಯೇತ್" ಎಂಬ ನೀತಿಯನ್ನು ಮರೆಯಬೇಡ. ಎಷ್ಟಾದರೂ ಸಿದ್ಧಾರ್ಥನು ನಮಗೆ ಮುಂದೆ ಪ್ರಭುವಾಗತಕ್ಕವನು. ಅವನ ವಿಚಾರದಲ್ಲಿ ಹೀಗೆ ಪ್ರತಿಭಟಿಸುವುದು ಉಚಿತವಲ್ಲ.

**ದೇವದತ್ತ**—ಸುಮ್ಮನಾಗು, ಮುದಿಹಾರವ. ಶಾಕ್ಯವೀರರಿಗೆ ಯುಕ್ತಾಯುಕ್ತಗಳನ್ನು ಬೋಧಿಸಲು ನೀನು ಯಾರು? ನಡೆ, ನಂದ. ಈ ವೃದ್ಧನೊಡನೆ ವೃಥಾ ಚರ್ಚೆಯೇಕೆ? ನಮ್ಮ ಧನುರ್ವಿದ್ಯಾ ಪ್ರದರ್ಶನಕ್ಕೆ ಈ ಅರಣ್ಯದಲ್ಲೆಲ್ಲಾದರೂ ಅವಕಾಶವು ಸಿಗುವುದೇನೋ ನೋಡೋಣ.

[ಇಬ್ಬರೂ ಹೋಗುವರು]

**ಮೈತ್ರೇಯ**—ಎಷ್ಟೊಂದು ಅಜಗಜಾಂತರ. ಶಾಂತಪ್ರಕೃತಿಯಾದ ನಮ್ಮ ಸಿದ್ಧಾರ್ಥಕುಮಾರನೆಲ್ಲಿ, ಕ್ಷಣಕೋಪಿಯಾದ ಈ ದೇವದತ್ತನೆಲ್ಲಿ? ಆದರೆ ಇಬ್ಬರೂ ಒಂದೇ ಗುರುಕುಲದಲ್ಲಿ ಒಬ್ಬ ಆಚಾರ್ಯನ ಇಷ್ಟಶಿಷ್ಯರಾಗಿ ಬೆಳೆಯುತ್ತಿರುವರು. ಇಬ್ಬರೂ ರಾಜವಂಶೀಯರು ಸಮಾನ ವಯಸ್ಕರು. ಆದರೆ ಗುಣದೋಷಗಳು ಮಾತ್ರ ಸಮಾನವಲ್ಲ. ಇದಕ್ಕೇ ಅಲ್ಲವೆ ಭಿನ್ನಸೃಷ್ಟಿಯೆನ್ನುವುದು!

[ಹೋಗುವನು]

[ಬಳಿಕ ಚಿಂತಾಮಗ್ನನಾದ ಸಿದ್ಧಾರ್ಥಕುಮಾರನು ಪ್ರವೇಶಿಸುವನು]

**ಸಿದ್ಧಾರ್ಥ**—ಪ್ರಕೃತಿಯು ಎಷ್ಟೊಂದು ಸುಂದರ ಮತ್ತು ಭಯಂಕರ! ಪ್ರಥಮದಲ್ಲಿ ಎಲ್ಲವೂ ರಮ್ಯವೂ, ಸಮೃದ್ಧವೂ, ಶಾಂತಿಮಯವೂ ಆಗಿರುವಂತೆ ತೋರಿ ಮನಸ್ಸಿಗೆ ಆನಂದವನ್ನುಂಟುಮಾಡುವುದು. ಆದರೆ ಸಾವಧಾನವಾಗಿ ಪರಿಶೀಲಿಸುವುದರಿಂದ ಹೊರಗಿನ ಈ

ಶಾಂತಿಯ ತೋರುವಿಕೆಯಲ್ಲಿ ಎಷ್ಟೊಂದು ಅಶಾಂತಿಯು ಮರೆಯಾಗಿರುವುದೆಂದು ಗೋಚರವಾಗುವುದು. ನೇಗಿಲನ್ನು ಹಿಡಿದು ಅವಿಶ್ರಾಂತನಾಗಿ ದುಡಿಯುವ ಕೃಷಿಕನ ಬಾಯಲ್ಲಿ ಹಾಡು, ಹೃದಯದಲ್ಲಿ ನಾಳಿನ ಹಿಡಿ ಅನ್ನಕ್ಕಾಗಿ ಕಾತರತೆ. ಅದರ ಸಲುವಾಗಿ ಅವನು ನಿರಪರಾಧ ಪಶುಗಳನ್ನು ನಿರ್ದಯನಾಗಿ ಹೊಡೆಯುವನು. ಜಗತ್ತಿನ ಕ್ರಿಮಿಕೀಟಾದಿ ಮಾನವವರ್ಗದವರಿವಿಗೂ ಯಾರನ್ನೂ ಯಾವುದನ್ನೂ ಈ ಹಿಂಸೆಯು ಬಿಟ್ಟಿದಲ್ಲ. ಒಂದನ್ನು ತಿಂದು ಜೀವಿಸುವ ಪ್ರಾಣಿಯು ಮುಂದೆ ಮತ್ತೊಂದರ ಆಹಾರವಾಗುವುದು. ಈ ಘಾತುಕವೃತ್ತಿಯ ಮೇಲಾಟವೇ ಪ್ರಕೃತಿಯ ನಿಯಮವೋ? ಈ ಹಿಂಸಾತ್ಮಕ ಕಠೋರದೃಶ್ಯವನ್ನು ನೋಡಲು ನಾನಿಲ್ಲಿಗೆ ಬಂದೆನೇ? ಜಗತ್ತನ್ನು ಆವರಿಸಿರುವ ಈ ಪ್ರತಿಹಿಂಸೆಗೆ ಯಾವ ಪರಿಹಾರವೂ ಇಲ್ಲವಲ್ಲ

[ಗಾಯಹೊಂದಿದ ಪಾರಿವಾಳವು ಕೆಳಗೆ ಬೀಳುವುದು]

ಇದೇನು! ಯಾರು ಈ ಸುಂದರ ಪಾರಿವಾಳದ ಮೇಲೆ ಅಂಬೆಸೆದವರು! [ಕೈಯಿಂದ ಹಕ್ಕಿಯನ್ನೆತ್ತಿ] ರೆಕ್ಕೆಯು ಗಾಯವಾಗಿ ರಕ್ತವು ಸುರಿಯುತ್ತಿರುವುದು! ಈಗೊಂದು ಕ್ಷಣದ ಮೊದಲು ಆನಂದದಿಂದ ಅಂತರಿಕ್ಷದಲ್ಲಿ ಹಾರಾಡುತ್ತಿದ್ದ ಹಕ್ಕಿಗೆ ಈಗ ಇಂತಹ ಅವಸ್ಥೆಯೇ! ನಿಷ್ಕರುಣಿಯಾದ ಬೇಟೆಗಾರನೆ, ಬಾ, ನಿನ್ನ ಅವಿಚಾರದ ಫಲವನ್ನು ನೋಡು. [ರಕ್ತವನ್ನೊರಸುತ್ತ] ಸುಮ್ಮನಿರು, ನನ್ನ ಮುದ್ದು ಹಕ್ಕಿಯೇ. ಔಷಧೋಪಚಾರಗಳಿಂದ ಗಾಯವನ್ನು ವಾಸಿಮಾಡಿ ಬಳಿಕ ನಿನ್ನನ್ನು ಹಾರಬಿಡುವೆನು. ಆನಂದದಿಂದ ನೆಗೆದು ಪುನಃ ನಿನ್ನ ಗೆಳೆಯರ ಗುಂಪನ್ನು ಸೇರಿಕೊ.

[ದೇವದತ್ತನೂ ನಂದನೂ ಪ್ರವೇಶಿಸುವರು]

**ದೇವದತ್ತ**—ಎಂದಿಗೂ ಆಗದು. ಈ ಪಾರಿವಾಳವನ್ನು ನಾನು ಹೊಡೆದೆನು. ಅದು ನನಗೆ ಸೇರತಕ್ಕದ್ದು, ರಾಜಕುಮಾರ.

**ಸಿದ್ಧಾರ್ಥ**—ಈ ಮುದ್ದುಹಕ್ಕಿಯ ಮೇಲೆ ಅಂಬೆಸೆದವನು ನೀನೇಯೋ? ಹಿಂಸೆಯು ಇಷ್ಟೊಂದು ಅಭಿಮಾನಾಸ್ಪದವಾದ ವಿಷಯವೇ ದೇವದತ್ತ? ಇಂತಹ ಸುಂದರ, ಸ್ನೇಹಶೀಲ, ಸಾಧುಪಕ್ಷಿಯನ್ನು ಹೊಡೆದವರು ತಮ್ಮ ನಿಷ್ಠುರಾಚಾರವನ್ನು ನಿನ್ನಂತೆ ಪ್ರಕಟಿಸುವುದಿಲ್ಲ.

ಅನುತಾಪದಿಂದ ದಗ್ಧರಾಗಿ ಕಪಿಲವಸ್ತುವಿನ ಯಾವುದಾದರೊಂದು ಅಭುಕ್ತ ಮೂಲೆಯಲ್ಲಿ ಕುಳಿತು ರೋದಿಸುತ್ತಿದ್ದರು.

**ದೇವದತ್ತ**—ನಾನಿಲ್ಲಿಗೆ ಬಂದದ್ದು ನಿನ್ನ ತತ್ವಬೋಧೆಯನ್ನು ಕೇಳುವ ಸಲುವಾಗಲ್ಲ. ಆ ಹಕ್ಕಿಯನ್ನು ನಾನು ಹೊಡೆದೆನು. ಬೇಟೆಯ ನಿಯಮಾನುಸಾರವಾಗಿ ಅದು ನನಗೆ ಸೇರತಕ್ಕದ್ದು. ನನ್ನ ವಸ್ತುವನ್ನು ನನಗೆ ಕೊಡು, ರಾಜಕುಮಾರ.

**ನಂದ**—ಹೌದು, ಸಿದ್ಧಾರ್ಥ. ಕ್ಷತ್ರಿಯನು ಬೇಟೆಯ ನಿಯಮ ವನ್ನು ಮೀರಲಾಗದು.

**ಸಿದ್ಧಾರ್ಥ**—ಅಲಂಘನೀಯವಾದ ಆ ನಿಯಮವನ್ನು ನಾನು ಬಲ್ಲೆ, ಸಹೋದರ. ಅಂಬಿನೇಟಿನಿಂದ ಪಾರಿವಾಳವು ಸತ್ತಿದ್ದರೆ, ಅದನ್ನು ಕೊಲೆಗಡಕನಿಗೆ ಹಿಂದಿರುಗಿಸುವುದು ಉಚಿತವಾಗಿತ್ತು. ಆದರೆ ಈ ಹಕ್ಕಿಯು ಇನ್ನೂ ಜೀವದಿಂದಿರುವುದು. ದೇವದತ್ತನು ಅದರ ಬಿಳಿದಾದ ಚೆಲ್ವಿನ ರೆಕ್ಕೆಗಳಲ್ಲಿದ್ದ ವಾಯುವಿನಂತಹ ವೇಗವನ್ನು ಮಾತ್ರ ಅಪಹರಿಸಿ ದನು, ಪ್ರಾಣವನ್ನಲ್ಲ.

**ದೇವದತ್ತ**—ಈ ನಿರುಪಯುಕ್ತವಾದ ವಾದವಿವಾದವು ನನಗೆ ಬೇಡ. ಪಾರಿವಾಳವು ಬದುಕಿರಲಿ, ಸತ್ತಿರಲಿ, ಯಾವನು ಅದನ್ನು ಭೂಮಿಗುರುಳಿಸಿದನೋ ಅವನಿಗೆ ಅದು ಸೇರುವುದು ಧರ್ಮ. ಗಗನದ ಹಕ್ಕಿಯು ಗಗನದಲ್ಲಿರುವವರೆಗೆ ಯಾರ ವಸ್ತುವೂ ಅಲ್ಲ. ಆದರೆ ನನ್ನ ಬಾಣವು ತಾಗಿ ನೆಲಕ್ಕುರುಳಿದೊಡನೆಯೇ ಅದು ನನ್ನದಾಯಿತು. ನನ್ನ ಬೇಟೆಯನ್ನು ನನಗೆ ಕೊಡು, ರಾಜಕುಮಾರ.

**ಸಿದ್ಧಾರ್ಥ**—ಇಲ್ಲ, ಕೊಡುವುದಿಲ್ಲ. ನಾನು ಇದಕ್ಕೆ ಪ್ರಾಣದಾನ ಮಾಡಿರುವೆನು. ಪ್ರೇಮ ಮತ್ತು ಕರುಣೆಯ ಸರ್ವವ್ಯಾಪಿಯಾದ ನಿಬಂಧಾನುಸಾರವಾಗಿ ಪ್ರಪಂಚದ ಸಮಸ್ತ ಅಸಹಾಯಕ ಜೀವ ಜಂತುಗಳ ಮೇಲೂ ಮನುಷ್ಯನ ಅಧಿಕಾರವಿರುವುದು. ನಾನು ಪಾರಿ ವಾಳವನ್ನು ಕೊಡುವುದಿಲ್ಲವೆಂದು ಹೇಳುವುದು ಆ ದೈವಿಕ ಅಧಿಕಾರದ ಬಲದಿಂದ. ನಂದ, ಈಗ ತಿಳಿದೆನು,—ಹಿಂಸಾತ್ಮಕಪ್ರಕೃತಿಯನ್ನು

ನೋಡಿದಾಗ ನನ್ನ ಹೃದಯಮಧ್ಯದಲ್ಲಿ ಪ್ರತಿಧ್ವನಿತವಾದ ಚಿಂತೆಯ ರಹಸ್ಯವನ್ನು. ದಯಾ, ಕರುಣೆ, ಅನುಕಂಪ, ಇವುಗಳ ಹೊರತು ಹಿಂಸೆಯ ತೀವ್ರ ವೇದನೆಯನ್ನು ಶಾಂತಗೊಳಿಸುವ ದಿವ್ಯೌಷಧವು ಮತ್ತಾವುದೂ ಇಲ್ಲ. ನಾನು ಈ ತತ್ವವನ್ನು ಜನರಿಗೆ ಬೋಧಿಸಿ ಜಗತ್ತಿನ ದುಃಖವನ್ನು ಪರಿಹರಿಸುವೆನು. ಮಾನವರ ದುಃಖವನ್ನು ಮಾತ್ರವಲ್ಲ. ಜೀವಸಹಿತವಾದ ಪ್ರತಿಯೊಂದು ಪ್ರಾಣಿಯ ದುಃಖವನ್ನೂ. ಬಾ, ಸಹೋದರ, ಈ ಹಿಂಸಕಸ್ಥಾನವನ್ನು ಬಿಟ್ಟು ಬೇರೆಡೆಗೆ ಹೋಗುವ.

[ಹೊರಡಲು ಉದ್ಯೋಗಿಸುವನು]

**ದೇವದತ್ತ**—[ತಡೆದು] ನಿಲ್ಲು, ಸಿದ್ಧಾರ್ಥ. ನನ್ನ ಹಕ್ಕಿಯನ್ನು ಕೊಟ್ಟ ಹೊರತು ನೀನು ಇಲ್ಲಿಂದ ಒಂದು ಹೆಜ್ಜೆಯನ್ನೂ ಮುಂದಿಡಲಾರೆ. ನಿನ್ನ ಸವಿನುಡಿಗಳಿಗೆ ನಂದನು ಮರುಳಾಗಬಹುದು. ಆದರೆ, ತಿಳಿದಿರು; ನಾನು ಮಾತ್ರ ಅದಕ್ಕೆಂದಿಗೂ ವಶನಾಗುವುದಿಲ್ಲ. ನನ್ನ ಹಕ್ಕಿಯನ್ನು ನನಗೆ ಕೊಡು. ಇಲ್ಲವೆ—

**ನಂದ**—ಈ ಭಯಪ್ರದರ್ಶನದಿಂದಾಗುವುದೇನು, ದೇವದತ್ತ?

**ದೇವದತ್ತ**—ಒಳ್ಳೆಯ ಕ್ಷತ್ರಿಯ ವೀರರು! ಅಡವಿಯ ಜೋಗಿಯಂತೆ ವೈರಾಗ್ಯದ ಮಾತುಗಳನ್ನಾಡುತ್ತಾ ಒಬ್ಬನು ಪಲಾಯನ. ಮತ್ತೊಬ್ಬನು ಉತ್ತರಕುಮಾರನಂತೆ ಪೌರುಷದ ನುಡಿಗಳನ್ನಾಡಿ ಅವನ ಹಿಂದೆ ಓಡುವುದು. ಎಷ್ಟು ಚೆನ್ನಾಗಿದೆಯೋ!

**ಸಿದ್ಧಾರ್ಥ**—ಸುಮ್ಮನಾಗು, ದೇವದತ್ತ. ದಯಾಮಯನಾದ ಪರಮೇಶ್ವರನು ನಮಗೆ ಶಕ್ತಿ ಸಾಮರ್ಥ್ಯಗಳನ್ನು ಕೊಟ್ಟಿದ್ದರೆ, ಅದರ ಉಪಯೋಗವು ಪರಸ್ಪರ ಕದನವಲ್ಲ. ಹಾಗೂ ನಿನ್ನೊಡನೆ ನಿರರ್ಥಕವಾಗಿ ಹೋರಾಡುವ ಇಚ್ಛೆಯೂ ನನಗಿಲ್ಲ.

**ದೇವದತ್ತ**—ಇಚ್ಛೆಯಿರಲಿ, ಇಲ್ಲದಿರಲಿ. ಇಂಥ ಹೋರಾಟವು ನಡೆಯಲೇಬೇಕು. ಕತ್ತಿಯನ್ನೊರೆಗಳಚು, ಸಿದ್ಧಾರ್ಥ.

**ನಂದ**—ಇದೇನು ಪ್ರಮಾದ! ಸ್ವಯಂ ರಾಜಕುಮಾರನ ಮೇಲೆ ಅಸ್ತ್ರಪಾತವೇ!

**ದೇವದತ್ತ**—ನನ್ನ ಹಕ್ಕಿ, ಅಥವಾ ಸಮ್ಮುಖ ಯುದ್ಧ.—ಇವೆರಡರಲ್ಲೊಂದು ನನಗೀಗ ದೊರೆಯಲೇಬೇಕು.

**ಸಿದ್ಧಾರ್ಥ**—ದೊರಕುವುದು. ಸಿದ್ಧನಾಗು, ದೇವದತ್ತ.

[ಕತ್ತಿಯನ್ನು ಹಿರಿದು ಹೋರಾಡುವರು. ಸಿದ್ಧಾರ್ಥನ ಹಸ್ತಚಾತುರ್ಯದಿಂದ ದೇವದತ್ತನ ಕತ್ತಿಯು ದೂರಹೋಗಿ ಬೀಳುವುದು]

**ಸಿದ್ಧಾರ್ಥ**—ಇನ್ನಾದರೂ ಶಾಂತನಾಗು, ನನ್ನ ದರ್ಪಿತ ಸಹೋದರ. ನಿನ್ನ ಅಪಮಾನದಿಂದ ನನಗೆ ನಿಜವಾಗಿ ದುಃಖವಾಗುವುದು.

**ದೇವದತ್ತ**—ಎಲ್ಲವನ್ನೂ ಮಹಾರಾಜರಿಗೆ ತಿಳಿಸುವೆನು. ಅವರೇ ನ್ಯಾಯಾನ್ಯಾಯವನ್ನು ನಿರ್ಧರಿಸಲಿ. ನನ್ನ ಹಕ್ಕಿಯನ್ನು ಮಾತ್ರ ಎಂದಿಗೂ ಬಿಡುವುದಿಲ್ಲ.

[ಶುದ್ಧೋದನನೂ ಅಸಿತಮುನಿಯೂ ಬರುವರು]

**ಶುದ್ಧೋದನ**—ಇದೇನು? ಕುಮಾರರೇ, ಏನಾಯಿತು?

**ನಂದ**—ದೊಡ್ಡಪ್ಪ, ದೇವದತ್ತನೊಂದು ಪಾರಿವಾಳವನ್ನು ಅಂಬಿನಿಂದ ಹೊಡೆದನು. ಅದು ಗಾಯಹೊಂದಿ ನೆಲಕ್ಕುರುಳಿದಾಗ ಸಿದ್ಧಾರ್ಥನದನ್ನು ತಾನು ತೆಗೆದುಕೊಂಡನು. ಈಗ ಆ ಹಕ್ಕಿಯು ಯಾರಿಗೆ ಸೇರಬೇಕು?

**ದೇವದತ್ತ**—ನನ್ನ ಅಂಬಿನೇಟಿಗೆ ಸಿಕ್ಕ ಹಕ್ಕಿಯು ನನಗೆ ಸೇರುವುದು ಬೇಟೆಯ ನಿಯಮ.

**ಸಿದ್ಧಾರ್ಥ**—ಆದರೆ ನಾನದರ ಪ್ರಾಣವನ್ನು ರಕ್ಷಿಸಿದೆನು, ತಂದೆ.

**ಶುದ್ಧೋದನ**—ಒಳ್ಳೆಯ ಸಂದಿಗ್ಧವಿಚಾರ. ಈ ಹಕ್ಕಿಯ ಮೇಲೆ ನಿಮ್ಮಿಬ್ಬರ ಅಧಿಕಾರವೂ ಇರುವುದು. ಅದರಲ್ಲಿ ಯಾರ ಅಧಿಕಾರವು ಹೆಚ್ಚೆಂಬುದನ್ನು ನಿರ್ಧರಿಸಬೇಕು. ಗುರುದೇವ, ಈ ವಿಚಾರದಲ್ಲಿ ನಿಮ್ಮ ಅಭಿಮತವೇನು?

**ಸಿದ್ಧಾರ್ಥ**—ಗುರುಗಳ ನಿರ್ಣಯವು ನನಗೆ ಸಮ್ಮತ.

**ದೇವದತ್ತ**—ನಾನು ನ್ಯಾಯವನ್ನು ಅಪೇಕ್ಷಿಸುವೆನು.

**ಅಸಿತ**—ರಾಜೇಂದ್ರ, ಅಂಬಿನ ಏಟಿನಿಂದ ಪಾರಿವಾಳವು ಸಾಯುವುದೆಂದು ತಿಳಿದಿದ್ದರೂ, ದೇವದತ್ತನು ಅದನ್ನು ಹೊಡೆದದ್ದರಿಂದ ಅವ

ನಿಗೆ ಬೇಕಾಗಿದ್ದುದು ಸತ್ತ ಪಾರಿವಾಳವೆಂದು ವ್ಯಕ್ತವಾಗುವುದು. ಸಿದ್ಧಾರ್ಥನು ಶರಘಾತದಿಂದ ನೆಲಕ್ಕುರುಳಿದ ಹಕ್ಕಿಯನ್ನೆತ್ತಿ ಶುಶ್ರೂಷೆಮಾಡಿ ಪ್ರಾಣದಾನಮಾಡಿರುವನು. ದೇಹಕ್ಕಿಂತ ಪ್ರಾಣವು ಹೆಚ್ಚಿನದೆಂದು ಜನರು ತಿಳಿಯುವುದಾದರೆ, ಪ್ರಾಣನಾಶಕ್ಕಿಂತ ಪ್ರಾಣದಾನವು ಮಹತ್ಕಾರ್ಯವಲ್ಲವೇ? ಘಾತುಕನು ಸೃಷ್ಟಿಯ ನಿಯಮವನ್ನು ಅತಿಕ್ರಮಿಸಿ ಉಪಯುಕ್ತವೂ ಸುಂದರವೂ ಆದ ಪ್ರಾಣಿಯನ್ನು ನಿರುಪಯುಕ್ತವಾದ ಬೀಭತ್ಸಕವಸ್ತುವಾಗಿ ಮಾರ್ಪಡಿಸುವನು. ಆದರೆ ಪ್ರಾಣದಾತನು ಸೃಷ್ಟಿಗೆ ಸಹಾಯಕನಾಗಿ ತನ್ನ ಅಸೀಮಕರುಣೆಯಿಂದ ಅದರ ಸೌಂದರ್ಯವನ್ನು ಮತ್ತಷ್ಟು ಉಜ್ವಲವಾಗಿ ಮಾಡುವನು. ಆದುದರಿಂದ ಪ್ರಾಣಿವರ್ಗದ ಮೇಲೆ ಘಾತುಕನ ಅಧಿಕಾರಕ್ಕಿಂತ ಪ್ರಾಣದಾತನ ಅಧಿಕಾರವು ಹೆಚ್ಚು. ಪಾರಿವಾಳವು ಸಿದ್ಧಾರ್ಥನಿಗೆ ಸೇರುವುದು ನ್ಯಾಯ. ದೇವದತ್ತನು ಅಪೇಕ್ಷಿಸುವುದಾದರೆ ಯಾವುದಾದರೊಂದು ಸತ್ತ ಹಕ್ಕಿಯನ್ನು ಪ್ರತಿಯಾಗಿ ತೆಗೆದುಕೊಳ್ಳಬಹುದು.

**ನಂದ**—ಸರ್ವಮಾನ್ಯವಾದ ನಿರ್ಣಯ. ಈಗೇನು ಮಾಡುವೆ, ದೇವದತ್ತ?

**ದೇವದತ್ತ**—ಒಂದು ಅಲ್ಪ ಪಾರಿವಾಳಕ್ಕಾಗಿ ಇಷ್ಟೊಂದು ವಿಡಂಬನೆ!

[ಹೊರಟುಹೋಗುವನು]

**ಶುದ್ಧೋದನ**—ಎಂತಹ ದರ್ಪಿತ ಬಾಲಕನಿವನು!

**ಅಸಿತ**—ವಿಷಲತೆಯು ಎಳದಾದಮಾತ್ರಕ್ಕೆ ಅದರ ವೇಗವೆಂದಿಗೂ ಕಡಿಮೆಯಾಗದು.

**ಶುದ್ಧೋದನ**—ಗುರುದೇವ, ಆ ಅಬೋಧ ಬಾಲಕನ ಅಸದ್ವರ್ತನೆಯನ್ನು ಮನಸ್ಸಿಗೆ ತಂದುಕೊಳ್ಳಲಾಗದು. ನಡೆ, ಕುಮಾರ.

[ಹೋಗುವರು]

[ತೆರೆ ಬೀಳುವುದು]

—**ಬಿ. ಪುಟ್ಟಸ್ವಾಮಯ್ಯ**

# ವ್ಯಾಘ್ರೀ ಜಾತಕ

ತನ್ನ ಹಿಂದಿನ ಜನ್ಮಗಳಲ್ಲಿ ಕೂಡ ಎಲ್ಲ ಪ್ರಾಣಿಗಳಲ್ಲೂ ಅಕಾರಣ ವಾತ್ಸಲ್ಯವುಳ್ಳವನಾಗಿ, ಎಲ್ಲ ಪ್ರಾಣಿಗಳನ್ನೂ ತನ್ನಂತೆಯೇ ಎಣಿಸಿದ್ದ ಭಗವಂತನಾದ ಬುದ್ಧದೇವನಲ್ಲಿ ಶ್ರದ್ಧೆಯನ್ನಿಡಬೇಕು.

ರತ್ನತ್ರಯಗಳನ್ನು ಮರ್ಯಾದಿಸಿ, ತಮ್ಮ ಜ್ಞಾನ ಮತ್ತು ಸದ್ಗುಣ ಗಳಿಂದ ತಮ್ಮ ಗುರುಗಳನ್ನು ಸಂತೋಷಗೊಳಿಸಿ, ತಮ್ಮ ಸದ್ಗುಣಗಳ ಹಿರಿಮೆಯಿಂದ ಗೌರವಾರ್ಹರಾಗಿ ಇರುವ ನಮ್ಮ ಗುರುಗಳಿಂದ ಪ್ರಸಿದ್ಧಿ ಪಡೆದ ಈ ಭಗವಂತನಾದ ಬುದ್ಧನ ಪೂರ್ವಜನ್ಮದ ಚರಿತೆ ಹೀಗೆ ಕೇಳಿ ಬರುತ್ತದೆ:

ಭಗವಂತನಾದ ಬೋಧಿಸತ್ವನು ಒಮ್ಮೆ ತನ್ನ ಮಹಾಪ್ರತಿಜ್ಞೆಗೆ ಅನುಗುಣವಾಗಿ ದಾನ, ಪ್ರಿಯವಚನ, ಸಾಹಾಯ್ಯವೇ ಮೊದಲಾದ ಜ್ಞಾನವನ್ನು ಪ್ರಧಾನವಾಗಿ ಪರಿಗ್ರಹಿಸಿದ ಸ್ತುತ್ಯವಾದ ಕೆಲಸ ಗಳಿಂದಲೂ ಕರುಣೆಯ ಧಾರೆಯಿಂದಲೂ ಲೋಕವನ್ನು ಅನುಗ್ರಹಿ ಸುತ್ತಾ, ಒಮ್ಮೆ ಸ್ವಧರ್ಮವನ್ನು ಅನುಷ್ಠಿಸಿ ಶುದ್ಧ ಚಾರಿತ್ರವುಳ್ಳ ಶ್ರೇಷ್ಠ ವಾದ ಬ್ರಾಹ್ಮಣ ಕುಲವೊಂದರಲ್ಲಿ ಜನ್ಮ ತಾಳಿದನು. ಕ್ರಮವಾಗಿ ಮಾಡಿದ ಜಾತಕರ್ಮಾದಿ ಸಂಸ್ಕಾರಗಳಿಂದ ವೃದ್ಧಿಯನ್ನು ಹೊಂದುತ್ತಾ, ಸ್ವಾಭಾವಿಕವಾದ ಬುದ್ಧಿಶಕ್ತಿಯಿಂದಲೂ, ಅಭ್ಯಾಸಕ್ಕೊದಗಿದ ಸಾಹಾ ಯ್ಯಸಂಪತ್ತಿಯಿಂದಲೂ, ತಿಳಿವಳಿಕೆಯ ವಿಷಯದಲ್ಲಿ ತನಗಿದ್ದ ಕೌತೂ ಹಲದಿಂದಲೂ, ಉತ್ಸಾಹದಿಂದಲೂ, ಅತ್ಯಲ್ಪ ಕಾಲದಲ್ಲಿಯೇ ಹದಿ ನೆಂಟು ವಿದ್ಯಾಸ್ಥಾನಗಳಲ್ಲಿಯೂ, ಕುಲಕ್ರಮಾನುಗತವಾದ ಎಲ್ಲ ಕಲೆ ಗಳಲ್ಲಿಯೂ ಆಚಾರ್ಯಕಪದವನ್ನು (ಶಿಕ್ಷಣ ಕೊಡುವ ಯೋಗ್ಯತೆ ಯನ್ನು) ಸಂಪಾದಿಸಿದನು.

ಆತನು ಬ್ರಾಹ್ಮಣರಿಗೆ ಬ್ರಹ್ಮದಂತೆಯೂ, ಕ್ಷತ್ರಿಯರಿಗೆ ರಾಜ ನಂತೆಯೂ ಗೌರವನೀಯನಾದನು; ಪ್ರಜೆಗಳೆಲ್ಲರಿಗೂ ಸಾಕ್ಷಾತ್ ಇಂದ್ರನೆಂಬಂತೆಯೂ, ಜ್ಞಾನಾರ್ಥಿಗಳಿಗೆ ಸಾಹಾಯ್ಯಕನಾದ ತಂದೆ ಯಂತೆಯೂ ಇದ್ದನು. (೧)

ಆತನ ಭಾಗ್ಯಾತಿಶಯದಿಂದಲೂ ಸದ್ಗುಣಗಳಿಂದಲೂ ಆತನಿಗೆ ಮಹತ್ತಾದ ಲಾಭವೂ, ಪುರಸ್ಕಾರವೂ, ಕೀರ್ತಿಯೂ ಉಂಟಾದುವು. ಧರ್ಮಾಭ್ಯಾಸದಿಂದ ಪರಿಶುದ್ಧವಾದ ಬುದ್ಧಿಯುಳ್ಳವನಾದುದರಿಂದಲೂ, ವೈರಾಗ್ಯವನ್ನು ಹೊಂದಿದ್ದುದರಿಂದಲೂ, ಆತನಿಗೆ ಅವುಗಳಿಂದ ಬಹಳ ಸಂತೋಷವುಂಟಾಗಲಿಲ್ಲ.

ತನ್ನ ಹಿಂದಿನ ಚರ್ಯೆಗಳಿಂದ ಪರಿಶುದ್ಧವಾದ ಮನಸ್ಸುಳ್ಳವನಾದುದರಿಂದ, ಆಸೆಗಳು ಬಹಳ ಕೆಡುಕುಗಳಿಂದ ಕೂಡಿವೆಯೆಂದು ಕಂಡು, ಗಾರ್ಹಸ್ಥ್ಯವನ್ನು ಒಂದು ರೋಗವೋ ಎಂಬಂತೆ ಒದರಿ, ಕಾಡಿನಲ್ಲೊಂದು ಎತ್ತರವಾದ ಪ್ರದೇಶದಲ್ಲಿ ನೆಲೆಸಿದನು. (೨)

ಅಲ್ಲಿ ಬೇರೊಬ್ಬರ ಸಹವಾಸವಿಲ್ಲದಿರುವಿಕೆಯಿಂದಲೂ, ತನ್ನ ನಿರ್ಮಲವಾದ ಬುದ್ಧಿಯಿಂದಲೂ, ಶಾಂತತೆಯಿಂದಲೂ ಕೂಡಿ ಅವನಿದ್ದುದನ್ನು ನೋಡಿದರೆ–ತಮ್ಮ ದುಷ್ಕಾರ್ಯಗಳ ದೆಸೆಯಿಂದ ಉತ್ತಮವಾದ ಶಾಂತಿಯಿಂದ ದೂರಹೊಂದಿದ ಮನುಷ್ಯಲೋಕವನ್ನು ಮೂದಲಿಸುವನೋ ಎಂಬಂತಿತ್ತು. (೩)

ಅಲ್ಲಿನ ಹಿಂಸ್ರಜಂತುಗಳು ಸಹ, ಆತನ ಮೈತ್ರೀಮಯವಾದ ಶಾಂತಿಯಿಂದ ತುಂಬಿದ ಹೃದಯಗಳನ್ನು ಹೊಂದಿವೆಯೋ ಎಂಬಂತೆ, ಒಂದನ್ನೊಂದು ಹಿಂಸಿಸುವ ಭಾವನೆಯನ್ನು ಬಿಟ್ಟು ತಪಸ್ವಿಗಳಂತೆ ತಿರುಗಾಡುತ್ತಿದ್ದುವು. (೪)

ಪರಿಶುದ್ಧವಾದ ಆಚಾರದಿಂದಲೂ, ಇಂದ್ರಿಯನಿಗ್ರಹದಿಂದಲೂ, ಸಂತುಷ್ಟಿಯಿಂದಲೂ, ಕಾರುಣ್ಯದಿಂದಲೂ, ಲೋಕದಲ್ಲಿ ಅಪರಿಚಿತರಾದವರಿಗು ಸಹ—ತನಗೆ ಲೋಕವು ಎಷ್ಟು ಪ್ರಿಯವಾಗಿದ್ದಿತೋ ಅಷ್ಟು—ಆತನು ಪ್ರೀತಿದಾಯಕನಾಗಿದ್ದನು. (೫)

ಏನೊಂದನ್ನೂ ಅಪೇಕ್ಷಿಸದಿದ್ದವನಾದುದರಿಂದ, ಮೋಸವನ್ನರಿಯದವನಾಗಿಯೂ, ಲಾಭ, ಕೀರ್ತಿ, ಸುಖಗಳಲ್ಲಿ ಆಸೆಯನ್ನು ತೊರೆದವನಾಗಿಯೂ, ತನ್ನ ವಿಷಯದಲ್ಲಿ ದೇವತೆಗಳ ಮನಸ್ಸು ಕೂಡ ಶ್ರದ್ಧಾಭಕ್ತಿಗಳಿಂದ ಕೂಡಿರುವಂತೆ ಮಾಡಿದ್ದನು. (೬)

ಆತನು ಸಂನ್ಯಾಸವನ್ನು ಹೊಂದಿದನೆಂದು ತಿಳಿದು, ಆತನ ಗುಣಗಳಿಂದ ಸೆಳೆಯಲ್ಪಟ್ಟ ಮನಸ್ಸುಳ್ಳವರಾಗಿ, ಜನರು, ಬಂಧುಗಳನ್ನೂ ಪತ್ನೀಪುತ್ರರನ್ನೂ ತೊರೆದು, ಸಿದ್ಧಿಯನ್ನೋ ಎಂಬಂತೆ ಆತನ ಶಿಷ್ಯತ್ವವನ್ನು ಹೊಂದುತ್ತಿದ್ದರು. (೭)

ಆತನು ಸಹ ಶೀಲದಲ್ಲಿಯೂ, ಶೌಚದಲ್ಲಿಯೂ, ಏಕಾಗ್ರಚಿತ್ತತೆಯಲ್ಲಿಯೂ, ಪ್ರಪಂಚದಿಂದ ಬೇರೆಯಾಗಿರುವಿಕೆಯಲ್ಲಿಯೂ, ಮೈತ್ರ್ಯಾದಿಗುಣಗಳಲ್ಲಿಯೂ, ಮನಃಸಮಾಧಿಯಲ್ಲಿಯೂ, ತನ್ನ ಶಕ್ತಿಗನುಗುಣವಾಗಿ ಶಿಷ್ಯರಿಗೆ ಉಪದೇಶ ಕೊಡುತ್ತಿದ್ದನು. (೮)

ಹಾಗಿರುವಲ್ಲೊಮ್ಮೆ, ತನ್ನ ದೊಡ್ಡದಾದ ಶಿಷ್ಯಗಣವು ಉಪದೇಶದ ಪೂರ್ಣತೆಯನ್ನು ಹೊಂದಿರಲು; ಈ ಮಂಗಳಕರವಾದ ಮಾರ್ಗದಲ್ಲಿ ಪ್ರತಿಷ್ಠಾಪಿತರಾಗಿರಲು; ಜನರೆಲ್ಲರೂ ಸಂನ್ಯಾಸದ ಸತ್ಪಥವನ್ನವಲಂಬಿಸಿರಲು; ಅಪಾಯದೆಡೆಗೆ ಕರೆದುಕೊಂಡುಹೋಗುವ ದ್ವಾರಗಳೆಲ್ಲವೂ ಮುಚ್ಚಿವೆಯೋ ಎಂಬಂತೆಯೂ, ಸುಗತಿಗೆ ಕರೆದೊಯ್ಯುವ ಮಾರ್ಗಗಳೆಲ್ಲವೂ ರಾಜಮಾರ್ಗಗಳಾಗಿ ಮಾಡಲ್ಪಟ್ಟಿವೆಯೋ ಎಂಬಂತೆಯೂ ಇರಲು; ಮಹಾತ್ಮನಾದ ಆತನು ತನ್ನ ಆಗಿನ ಶಿಷ್ಯನಾದ ಅಜಿತನೊಡನೆ ಯೋಗಾಭ್ಯಾಸಕ್ಕೆ ಅನುಕೂಲವಾಗಿರುವ ಪೊದೆಗಳಿಂದ ಆವೃತವಾದ ಬೆಟ್ಟದ ಗುಹೆಗಳಲ್ಲಿ ತಿರುಗಾಡುತ್ತಿದ್ದನು.

ಆ ಬೆಟ್ಟದ ಗುಹೆಯೊಂದರಲ್ಲೊಮ್ಮೆ, ಪ್ರಸವಿಸಿದುದರಿಂದ ಅಲುಗಾಡಲು ಕೂಡ ಆಗದೆಯೂ, ಹಸಿವಿನಿಂದ ಗುಳಿಬಿದ್ದ ಕಣ್ಣುಗಳನ್ನೂ ತೆಳ್ಳನೆಯ ಹೊಟ್ಟೆಯನ್ನೂ ಉಳ್ಳದ್ದಾಗಿಯೂ, ತನ್ನ ಮಕ್ಕಳನ್ನೇ ಆಹಾರವೆಂಬಂತೆ ನೋಡುತ್ತಲೂ, ಸ್ತನ್ಯಪಾನಮಾಡಲೋಸುಗ ತಾಯಿಯೆಡೆಗೆ ನಿರ್ಭಯದಿಂದ ಬಂದ ಅವುಗಳನ್ನು ಬೇರೆಯವೋ ಎಂಬಂತೆ ಭಯಂಕರವಾಗಿ ಕೂಗಿ ಹೆದರಿಸುತ್ತಲೂ ಇದ್ದ ಹೆಣ್ಣು ಹುಲಿಯೊಂದನ್ನು (ಬೋಧಿಸತ್ವನು) ಕಂಡನು. (೯, ೧೦, ೧೧)

ಅದನ್ನು ನೋಡಿ ಬೋಧಿಸತ್ವನು, ಧೀರನಾದರು ಸಹ ಕರುಣೆಯಿಂದ, ಇತರ ಜೀವಿಯ ದುಃಖದ ಕಾರಣದಿಂದ, ಭೂಕಂಪದ

ದೆಸೆಯಿಂದ ಪರ್ವತವು ಹೇಗೆ ಕಂಪಿಸುವುದೋ ಹಾಗೆ ಕಂಪಿಸಿದನು. (೧೨)

ಮಹತ್ತಾದ ತಮ್ಮ ಕಷ್ಟಗಳಲ್ಲಿ ಧೈರ್ಯವನ್ನು ವ್ಯಕ್ತಪಡಿಸಿದ ಕೃಪಾತ್ಮರು ಅಲ್ಪವಾದ ಪರರ ದುಃಖದಿಂದ ಕಂಪಿಸುತ್ತಾರೆಂಬುದು ಅದ್ಭುತವೇ ಸರಿ. (೧೩)

ಆಗ ಬೋಧಿಸತ್ವನು ತನ್ನ ಸ್ವಭಾವವನ್ನು ವ್ಯಕ್ತಗೊಳಿಸುವ, ತನ್ನ ದಯೆಯಿಂದ ಹೊರಬಿದ್ದ ಈ ಮಾತನ್ನು—ಗಾಬರಿಯಲ್ಲಿ ತಿರು ತಿರುಗಿ—ಶಿಷ್ಯನಿಗೆ ಹೇಳಿದನು: "ವತ್ಸ, ವತ್ಸ,

"ನೋಡು, ಸಂಸಾರದ ಕೆಟ್ಟತನವನ್ನು. ಈ ಹೆಣ್ಣು ಹುಲಿಯು ಹಸಿವಿನ ದೆಸೆಯಿಂದ ವಾತ್ಸಲ್ಯದ ಎಲ್ಲೆಯನ್ನು ಮೀರಿ, ತನ್ನ ಮರಿಗಳನ್ನೇ ತಿನ್ನಲಿಚ್ಛಿಸುತ್ತಿದೆ. (೧೪)

"ಅಬ್ಬಾ, ಈ ಆತ್ಮಸ್ನೇಹ (ತನ್ನ ಜೀವದ ವಿಷಯದಲ್ಲಿನ ಆಸೆ) ಎಷ್ಟು ರೌದ್ರವೂ ದುಃಖಕರವೂ ಆಗಿರುವುದು; ಇದರಿಂದ ತಾಯಿಯು ಸಹ ತನ್ನ ಮಕ್ಕಳನ್ನೇ ಆಹಾರಮಾಡಿಕೊಳ್ಳಲಿಚ್ಛಿಸುತ್ತಿದೆ. (೧೫)

"ಯಾವ ಆತ್ಮಸ್ನೇಹದಿಂದ ಇಂತಹ ದುಷ್ಕೃತ್ಯಗಳಲ್ಲೂ ಕಾಲಿಡಬೇಕಾಗುವುದೋ ಅಂತಹ ಈ ಶತ್ರುವಾದ ಆತ್ಮಸ್ನೇಹವನ್ನು ಯಾವನು ತಾನೇ ಬೆಳೆಯಲೆಡೆಗುಡಬಹುದು! (೧೬)

"ಆದುದರಿಂದ ಬೇಗನೆ ಎಲ್ಲಿಂದಲಾದರೂ ಈ ಪ್ರಾಣಿಯ ಹಸಿವಿಗೆ ಪ್ರತೀಕಾರಹೇತುವೊಂದನ್ನು ಹುಡುಕು; ಇಲ್ಲದಿದ್ದಲ್ಲಿ ತನ್ನನ್ನಾಗಲೀ ಮಕ್ಕಳನ್ನಾಗಲೀ ಸಂಕಟಕ್ಕೀಡುಮಾಡುತ್ತದೆ. ನಾನು ಸಹ ಈ ಹೆಣ್ಣು ಹುಲಿಯನ್ನು ಈ ಸಾಹಸಕಾರ್ಯದಿಂದ ನಿವಾರಿಸಲು ಯತ್ನ ಮಾಡುತ್ತೇನೆ." ಶಿಷ್ಯನು, "ಹಾಗೆಯೇ ಆಗಲೆ"ಂದು ಹೇಳಿ ಹೊರಟು ಹುಲಿಗೋಸ್ಕರ ಆಹಾರ ಹುಡುಕುವುದರಲ್ಲಿ ನಿರತನಾದನು. ಆಗ ಬೋಧಿಸತ್ವನು ಈ ಒಂದು ನೆವದಿಂದ ಶಿಷ್ಯನನ್ನು ಕಳುಹಿಸಿ, ಈ ರೀತಿ ಚಿಂತಿಸಿದನು:

"ನನ್ನೀ ಸಕಲ ಶರೀರವೂ ಇರಲು, ಬೇರೊಂದು ಪ್ರಾಣಿಯ ಶರೀರದಿಂದ ಮಾಂಸವನ್ನು ಹುಡುಕಲೇಕೆ? ಆ ಮಾಂಸ ಸಿಗಬಹುದು, ಸಿಗದಿದ್ದರೂ ಇರಬಹುದು; ಅಲ್ಲದೆ ನನ್ನ ಕರ್ತವ್ಯವನ್ನು ಮಾಡಲೊದಗಿರುವ ಈ ಅವಕಾಶವನ್ನೂ ಕಳೆದುಕೊಳ್ಳಬೇಕಾಗುವುದು. (೧೭)

"ಪರರ ಹಿತಕ್ಕೋಸ್ಕರ ಯಾವನು ಈ ನಿರಾತ್ಮಕವಾದ, ನಶ್ವರವಾದ, ನಿಸ್ಸಾರವಾದ, ದುಃಖಕರವಾದ, ಕೃತಘ್ನವಾದ, ಯಾವಾಗಲೂ ಅಶುದ್ಧವಾದ ದೇಹವನ್ನು ಉಪಯೋಗಿಸಲು ಸಂತೋಷಪಡುವುದಿಲ್ಲವೋ ಆತನು ಜ್ಞಾನಿಯಲ್ಲ. (೧೮)

"ಸ್ವಸುಖದಲ್ಲಿ ಆಸಕ್ತಿಯೂ ಸಾಹಾಯ್ಯ ಮಾಡಲು ಶಕ್ತಿಯಿಲ್ಲದಿರುವಿಕೆಯೂ ಬೇರೊಬ್ಬರ ದುಃಖವನ್ನು ಉಪೇಕ್ಷಿಸಲು ಕಾರಣಗಳು. ಪರರಿಗೆ ದುಃಖವಿದ್ದರೆ, ನನಗೆ ಸುಖವಿಲ್ಲ; ಅಲ್ಲದೆ ಶಕ್ತಿಯು ಸಹ ಇರುವಲ್ಲಿ ನಾನೇಕೆ ಉಪೇಕ್ಷಿಸಲಿ? (೧೯)

"ಶಕ್ತಿಯೂ ಇದ್ದು ದುಃಖದಲ್ಲಿ ಮುಳುಗಿದ ಮಹಾ ಪಾತಕಿಯನ್ನು ಸಹ ಉಪೇಕ್ಷೆ ಮಾಡಿದ್ದೇ ಆದರೆ, ನನ್ನ ಮನಸ್ಸು ನಾನೇ ಪಾಪಮಾಡಿದೆನೋ ಎಂಬಂತೆ, ದೊಡ್ಡ ಬೆಂಕಿಯಲ್ಲಿ ಉರಿಯುವ ಒಣ ಹುಲ್ಲಿನಂತೆ, ಬೆಂದು ಬೂದಿಯಾದೀತು. (೨೦)

"ಆದುದರಿಂದ, ಈ ಶಿಖರದಿಂದ ಕೆಳಗೆ ಬಿದ್ದು, ಜೀವರಹಿತವಾದ ನನ್ನ ದೇಹದಿಂದ ಈ ಹೆಣ್ಣು ಹುಲಿಯ ಸಂರಕ್ಷಣವನ್ನು ಪುತ್ರವಧೆಯಿಂದಲೂ, ಈ ಹುಲಿಮರಿಗಳ ಸಂರಕ್ಷಣವನ್ನು ಅವುಗಳ ತಾಯಿಯ ದೆಸೆಯಿಂದಲೂ ಮಾಡಬಯಸುತ್ತೇನೆ. (೨೧)

"ಅಲ್ಲದೆ—

"ಈ ಕೆಲಸವು ಲೋಕದ ಹಿತಕ್ಕೋಸ್ಕರ ಶ್ರಮಿಸುವ ಎಲ್ಲರಿಗೂ ಮಾದರಿಯಾಗುವುದು; ಅಲ್ಪವಾದ ಪರಾಕ್ರಮವುಳ್ಳವರಿಗೆ ಉತ್ತೇಜನವಾಗುವುದು; ತ್ಯಾಗಮಾಡುವುದರಲ್ಲಿ ವಿಶಾರದರೆನಿಸಿದವರಿಗೆ ಸಂತೋಷಕರವಾಗುವುದು; ಸತ್ಪುರುಷರ ಮನಸ್ಸನ್ನು ಸೆಳೆಯುವುದಾಗುವುದು; ಮಾರನ ದೊಡ್ಡ ಸೈನ್ಯಗಳಿಗೆ ನಿರಾಶೆ ಹೊಂದಿಸುವುದಾಗುವುದು;

ಜ್ಞಾನಿಯ (ಬುದ್ಧನ) ಗುಣಗಳಿಂದ ಸಂತೋಷಿಸುವವರಿಗೆ ಹರ್ಷವುಂಟು ಮಾಡುವುದಾಗುವುದು; ಅಸೂಯೆ ದುರಾಸೆಗಳಿಂದ ಪೀಡಿತರಾದವರಿಗೂ ಸ್ವಾರ್ಥಪರಾಯಣರಾದವರಿಗೂ ನಾಚಿಕೆ ಹುಟ್ಟಿಸುವಂತಹುದಾಗುವುದು; 'ಯಾನ'ಶ್ರೇಷ್ಠವಾದ ಈ ಬುದ್ಧಯಾನವನ್ನಾಶ್ರಯಿಸಿದವರಿಗೆ ಶ್ರದ್ಧೆಯನ್ನುಂಟುಮಾಡುವುದು; ತ್ಯಾಗಮಾಡಿದೆನೆಂದು ಹೆಮ್ಮೆಪಡುವವರಿಗೆ ಆಶ್ಚರ್ಯ ಹುಟ್ಟಿಸುವಂತಹುದಾಗುವುದು; ತ್ಯಾಗಪ್ರಿಯರಾದ ಜನರಿಗೆ ಹೇಗೆ ಅನುಮತವೋ ಹಾಗೆ ಸ್ವರ್ಗದ ಹೆದ್ದಾರಿಯನ್ನು ಶೋಧಿಸುವಂತಹುದಾಗುವುದು. (೨೨, ೨೩, ೨೪)

"'ಯಾವಾಗ ನನ್ನ ಶರೀರದಿಂದ ಪರರ ಹಿತವನ್ನು ಮಾಡುವೆನೋ' ಎಂಬ ಯಾವ ನನ್ನ ಬಯಕೆಯಿದ್ದಿತೋ ಅದನ್ನೀಗ ಈಡೇರಿಸಿಕೊಳ್ಳುತ್ತೇನೆ; ಅಲ್ಲದೆ ಬೇಗನೆ "ಸಂಬೋಧಿ" (ಪೂರ್ಣಜ್ಞಾನ)ಯನ್ನು ಸಹ ಗಳಿಸಿಕೊಳ್ಳುತ್ತೇನೆ (೨೫)

"ಮತ್ತೆ—

"ಸ್ಪರ್ಧಿಸಬೇಕೆಂದಾಗಲಿ, ಯಶಸ್ಸನ್ನು ಹೊಂದಬೇಕೆಂಬಾಸೆಯಿಂದಾಗಲಿ, ಸ್ವರ್ಗಲಾಭಕ್ಕೋಸ್ಕರವಾಗಲಿ, ರಾಜ್ಯವನ್ನು ಹೊಂದಬೇಕೆಂದಾಗಲಿ, ನನಗೋಸ್ಕರ ನಿತ್ಯವಾದ ಸುಖವನ್ನು ಪಡೆಯಬೇಕೆಂದಾಗಲಿ—ನನಗೆ ಈ ಕೆಲಸದಲ್ಲಿ ಆದರವುಂಟಾಗಿಲ್ಲ; ಪರರ ಹಿತದ ಸಲುವಾಗಲ್ಲದೆ ಬೇರೆಯಲ್ಲ. (೨೬)

"ಸೂರ್ಯನು ಹೇಗೆ ಒಮ್ಮೆಯೇ ಕತ್ತಲೆಯನ್ನು ತೊಲಗಿಸಿ ಬೆಳಕನ್ನುಂಟುಮಾಡುವನೋ ಹಾಗೆಯೇ ಒಮ್ಮೆಯೇ ನಾನು ಲೋಕದ ದುಃಖವನ್ನು ಕಳೆದು ಸುಖವನ್ನುಂಟುಮಾಡುವವನಾಗಲಿ. (೨೭)

"ನನ್ನೀ ಗುಣಗಳನ್ನು ತಿಳಿದು, ಸ್ಮೃತಿಯಲ್ಲಿ ಬಂದರೂ, ಕಥೆಯಲ್ಲಿ ಹೇಳಲ್ಪಟ್ಟು ಪ್ರಸಿದ್ಧನಾದರೂ ಯಾವಾಗಲೂ ಎಲ್ಲ ತೆರನಾಗಿಯೂ ಜಗತ್ತಿನ ಹಿತವನ್ನು ಸುಖದೊಡನೆ ಕೂಡಿರುವಂತೆ ಮಾಡುವವನಾಗಲಿ. (೨೮)

ಹೀಗೆ ನಿಶ್ಚಯಿಸಿ, ಪರರ ಹಿತಕ್ಕೋಸ್ಕರ ಜೀವ ತೊರೆಯಲು ಸಂತೋಷ ಹೊಂದಿ, ಧೀರರಾದ ದೇವತೆಗಳ ಮನಸ್ಸನ್ನೂ ಆಶ್ಚರ್ಯ ಗೊಳಿಸುತ್ತಾ ತನ್ನ ಶರೀರವನ್ನು ಬಿಟ್ಟನು. (೨೯)

ಆಗ ಆ ವ್ಯಾಘ್ರಿಯು ಬೋಧಿಸತ್ವನ ಶರೀರವು ಬಿದ್ದ ಶಬ್ದದಿಂದ ಕುತೂಹಲವನ್ನೂ ಕೋಪವನ್ನೂ ಹೊಂದಿ, ತನ್ನ ಮರಿಗಳನ್ನು ಕೊಲ್ಲುವ ಪ್ರಯತ್ನವನ್ನು ಬಿಟ್ಟು, ಆ ಕಡೆಗೆ ತನ್ನ ದೃಷ್ಟಿಯನ್ನು ಬೀರಿತು. ಬೋಧಿಸತ್ವನ ಜೀವಹೋದ ಶರೀರವನ್ನು ಕಂಡೊಡನೆಯೇ ಅಲ್ಲಿಗೆ ಬಂದು ಅದನ್ನು ತಿನ್ನಲುಪಕ್ರಮಿಸಿತು. ಆಗ ಆತನ ಶಿಷ್ಯನು ಮಾಂಸವೆಲ್ಲೂ ಸಿಕ್ಕದೆ ಹಿಂದಿರುಗಿ "ಉಪಾಧ್ಯಾಯನೆಲ್ಲಿ?" ಎಂದು ನೋಡಲು, ಬೋಧಿಸತ್ವನ ಕಳೇಬರವನ್ನು ವ್ಯಾಘ್ರಿಯು ತಿನ್ನುತ್ತಿರು ವುದನ್ನು ಕಂಡನು. ಆಗ ಶಿಷ್ಯನು ಆ ಕೆಲಸವನ್ನು ನೋಡಿ ಶೋಕಾ ವೇಗಗಳನ್ನುಳಿದು ಆಶ್ಚರ್ಯಗೊಂಡು ಗುರುವಿನ ಸದ್ಗುಣಾಶ್ರಯದ ಬಹುಮತಿಯೋ ಎಂಬಂತಿರುವ ಈ ಮಾತನ್ನು ತನ್ನೊಳಗೆ ತಾನೇ ಹೇಳಿಕೊಂಡಿರಬಹುದು :—

"ಆಹಾ, ವ್ಯಸನಪೀಡಿತರಾದ ಜನರಲ್ಲಿ ಈತನ ದಯೆಯೆಷ್ಟು! ಮಹಾತ್ಮನಾದ ಇವನಿಗೆ ಸ್ವಸುಖದಲ್ಲಿ ಎಷ್ಟು ವಿರಕ್ತಿ! ಸತ್ಪುರುಷರ ಇರುವಿಕೆಯೇ ಮೇಲ್ಮೆಯನ್ನೈದಿತಲ್ಲವೇ ! ಇತರರ ಯಶಸ್ಸಂಪತ್ತು ನಾಶ ಮಾಡಲ್ಪಟ್ಟಿದೆ. ಈಗ ಇವನ ಪರಾಕ್ರಮಪೂರ್ಣವಾದ, ನಿರ್ಭಯ ವಾದ, ಸದ್ಗುಣಗಳಿಂದೊಡಗೂಡಿದ ವಿಸ್ತಾರವಾದ ವಾತ್ಸಲ್ಯವು ಪ್ರದ ರ್ಶಿತವಾಗಿದೆ. ಗುಣಗಳಿಂದ ಪರಿಪೂರ್ಣವಾದ ಈತನ ಶರೀರವೀಗ ಗೌರವವಿಶೇಷಕ್ಕೆ ಈತನನ್ನು ಪಾತ್ರನನ್ನಾಗಿ ಮಾಡಿದೆ. ನೈಸರ್ಗಿಕ ವಾದ ಸೌಮ್ಯತೆಯಿಂದ ಭೂಮಿಯಷ್ಟೆ ಧೃತಿ (ಧೈರ್ಯ) ಹೊಂದಿದವ ನಾದರೂ, ಇತರರ ದುಃಖದ ವಿಷಯದಲ್ಲೀತನ ಕೋಪವೆಷ್ಟು! ಈತನ ಈ ಪರಾಕ್ರಮ ಪ್ರದರ್ಶನದಿಂದ ನನ್ನ ಖಟುಂಕತೆ (ಒರಟುತನ) ಈಗ ಪ್ರಕಾಶತೆಯನ್ನು ಹೊಂದಿದೆ. (೩೦,೩೧, ೩೨)

" ಈಗಲೀಗ ಈತನ ಒಡೆತನವನ್ನು ಹೊಂದಿದ ಜಗತ್ತಿನ ವಿಷಯ ದಲ್ಲಿ ಶೋಕಿಸಲು ಅವಶ್ಯಕವಿಲ್ಲ; ಮನ್ಮಥನು ಸಹ ಸೋತು ಹೋಗುವೆ

ನೆಂಬ ಭಯದಿಂದಲೂ ಕಳವಳದಿಂದಲೂ ನಿಟ್ಟುಸಿರುಬಿಡುತ್ತಲೇ ಇರಬೇಕು. (೩೩)

"ಆದುದರಿಂದ ಮಹಾತ್ಮನಾದ, ಮಹಾಭಾಗ್ಯಶಾಲಿಯಾದ, ಎಲ್ಲ ಜೀವಿಗಳಿಗೂ ಆಶ್ರಯನಾದ, ಅಪಾರವಾದ ಕೃಪೆಯಿಂದ ಕೂಡಿದ, ಅಮಿತ ಪರಾಕ್ರಮಶಾಲಿಯಾದ, ಭೂತಾರ್ಥ ಬೋಧಿಸತ್ವನಾದ (ಜೀವಿಗಳ ಹಿತವನ್ನರಿತ) ಈತನಿಗೆ ಎಲ್ಲ ಪ್ರಕಾರದಿಂದಲೂ ನಮಸ್ಕಾರ" ಎಂದು, ಆಮೇಲೆ ಆತನು ಈ ವಿಷಯವನ್ನು ತನ್ನ ಜತೆಯ ಶಿಷ್ಯರಿಗೆ ಹೇಳಿದನು.

ಈ ಅದ್ಭುತ ಕಾರ್ಯವನ್ನು ಕೇಳಿ ಅಚ್ಚರಿಗೊಂಡ ಆತನ ಶಿಷ್ಯರಿಂದಲೂ, ಗಂಧರ್ವರಿಂದಲೂ, ಯಕ್ಷರಿಂದಲೂ, ನಾಗರಿಂದಲೂ, ದೇವತಾಧಿಪತಿಗಳಿಂದಲೂ ಸುರಿಸಲ್ಪಟ್ಟ ಹೂಮಾಲೆ, ವಸ್ತ್ರ, ಆಭರಣ, ಚಂದನಚೂರ್ಣಗಳ ಮಳೆಯಿಂದ ಆತನ ಮೂಳೆಗಳೆಂಬ ನಿಧಿಯು ಮುಚ್ಚಲ್ಪಟ್ಟ ಕಾರಣ ಭೂಮಿಯು "ವಸುಧೆ"ಯಾಯಿತು. (೩೪)

ಹೀಗೆ ತನ್ನ ಹಿಂದಿನ ಜನ್ಮಗಳಲ್ಲಿ ಕೂಡ ಎಲ್ಲ ಪ್ರಾಣಿಗಳಲ್ಲೂ ಅಕಾರಣ ವಾತ್ಸಲ್ಯವುಳ್ಳವನಾಗಿ, ಎಲ್ಲ ಪ್ರಾಣಿಗಳನ್ನೂ ತನ್ನಂತೆಯೇ ಎಣಿಸಿದ್ದ ಭಗವಂತನಾದ ಬುದ್ಧದೇವನಲ್ಲಿ ಶ್ರದ್ಧೆಯಿಡಬೇಕು. "ಬುದ್ಧದೇವನಲ್ಲಿ ಶ್ರದ್ಧೆಯಿಟ್ಟಬಳಿಕ ಪರಮ ಸಂತೋಷವು ಉಂಟುಮಾಡಲ್ಪಡಬೇಕು. ಹೀಗೆಯೇ ನಮ್ಮ ಭಕ್ತಿಯೊಂದು ಪವಿತ್ರಸ್ಥಾನವನ್ನಲಂಕರಿಸುತ್ತದೆ" ಎಂಬುದಾಗಿ ಸಹ ಹೇಳಬೇಕು. ಹಾಗೆಯೇ ಗೌರವದಿಂದ 'ಧರ್ಮ'ವನ್ನು ಕೇಳಬೇಕು; ಏಕೆಂದರೆ, ನೂರಾರು ದುಃಸಾಧ್ಯವಾದ ಕೆಲಸಗಳಿಂದ ಅದನ್ನು (ಧರ್ಮವನ್ನು) ಸೆಳೆದು ತಂದಿರುವುದರಿಂದ. ಕರುಣಾಪ್ರಸಂಗದಲ್ಲಿ ಹೀಗೆ ಹೇಳಬೇಕಾಗುವುದು—'ಬೇರೊಬ್ಬರ ಹಿತಕ್ಕೋಸ್ಕರ ಪ್ರಯತ್ನಹುಟ್ಟಿಸುವ ಮತ್ತು ಹಿರಿದಾದ ಸ್ವಭಾವವನ್ನುಂಟುಮಾಡುವ ಗುಣವೇ ಕರುಣೆ'ಯೆಂದು.

—ಆರ್ಯಶೂರನ '**ಜಾತಕಮಾಲೆ**'ಯಿಂದ